# ಪ್ರಸ್ತಾವನೆ.

ಇದು ನನ್ನ ಚಿಕ್ಕ ಕಥೆಗಳ ಎರಡನೆಯ ಗೊಂಚಲು. ಗೊಂಚಲಿಗೆ—ಮೊದಲ ಕಥೆಯ ಹೆಸರನ್ನು ಕೊಟ್ಟಿರುವೆ. "ಹಾವು"—ಎಂದು. ಮಾನವ ಜೀವನದಲ್ಲಿ ತಾರುಣ್ಯವೇ ಪರಿವರ್ತನೆಯ ಕಾಲ. ತೀರ ಕೋಮಲವಾದ ಕಾಲವದು. ಆ ಕಾಲವು ಪಾಲನೆಯಿಂದ ಸಕ್ಕರೆಯಾಗಬಹುದು; ಆಲಸ್ಯ ದಿಂದ ಬೇವಾಗಬಹುದು. ಜೀವನ ಪ್ರವಾಹದ ಗತಿಯನ್ನು ಈ ಕಾಲದಲ್ಲಿ ತಿರುಗಿಸಿದರೆ, ಬೇಕಾದ ದಿಕ್ಕಿಗೆ ತಿರುಗಿಸಬಹುದು. ಆದರೆ ತಿರುಗಿಸುವವರು, ಯೋಗ್ಯ ಹಾದಿಯನ್ನು ಹುಡುಕುವ ಮೊದಲು, ಕೆಡುಕಿನ ಹಾದಿ ಯಾವು ದೆಂಬುದನ್ನಾದರೂ ತಿಳಿದಿರುವುದು ಅವಶ್ಯ.

"ಹಾವು" ಎಂಬುದು ಕಥೆಯೇ ಅಲ್ಲ. ಅದು ಕೇವಲ **ಔಪಮಾ ನಿಕ ರಚನೆ.** ಜೀವನದ ಉದ್ಗಮದಲ್ಲಿ ವಿಷವನ್ನು ಕಾರಿ ಸಂಸಾರವನ್ನು ಕೆಡಿಸುವ ದುರ್ನಡೆಗಳೇ ಈ ಹಾವುಗಳು. "ಹಾವು" ಎಂಬ ಕಥೆಯಲ್ಲಿನ ಹಾವು, ಯಾವ ಹಾವೂ ಆಗಬಹುದು. ವಿಷವನ್ನು ಕಾರುವ ಯಾವ ದುರ್ಗು ಣವೂ ಆಗಬಹುದು. ಅಂತಹ ಭೀಕರ ವಿಷಜಂತುಗಳಿಂದ ಇಂದು ಸಮಾ ಜವೇ ಕೆಡುತ್ತಿದೆ. ಸಮಾಜದ ಶರೀರವನ್ನು ಪೂರ್ಣ ಕೆಡಿಸುತ್ತಿರುವ ದೊಡ್ಡ ಹಾವೆಂದರೆ ಕಾಮ.

ತಾರುಣ್ಯವು ಇದರ ಸುಳಿವಿಗೆ ಮೈಯೊಡ್ಡಿ ಬಲಿಯಾಗುವಷ್ಟು ಇನ್ನಾವ ಕಾಲವೂ ಆಗುವುದಿಲ್ಲ. ಕಾಮದ ಗಾಳಿ ಲಲನೆಯ ಮೈಸೋಂಕಿ ಬರ ಬಹುದು, ಕೇವಲ ವಿಷಮಯ ಯೋಚನೆಗಳ ಫಲಿತವಾಗಿ, ಮುಷ್ಟಿಮೈಥು ನಾದಿ ಚೇಷ್ಟೆಗಳಿಂದ ತನಗೆ ತಾನೇ ಮೃತ್ಯುವಾಗಿ ಬೀಸಲೂ ಬಹುದು.

ಇಂಥ ಹಾವುಗಳು ಇಂದು ಎಲ್ಲಿ ನೋಡಿದಲ್ಲಿ ಓಡಾಡುತ್ತಿರುವಾಗ, ತಾರುಣ್ಯವು ಮೈಮರೆತು ಚಲಿಸಿದರೆ, ಪರಿಣಾಮವು ಪ್ರಳಯವೇ ಸರಿ! ಎಚ್ಚರಿದ್ದು, ಗಾರುಡಿಗನಂತೆ ಅದರ ಹೆಡೆಯನ್ನು ಹಿಡಿದು ವಿಷದ ಹಲ್ಲು

ಗಳನ್ನು ಕಿತ್ತುತೆಗೆಯಬಲ್ಲವನೇ, ಅದರಿಂದ ಜಗಕ್ಕೆ ಸೋಜಿಗದ ಆಟಗಳನ್ನು ತೋರಿಸಲು ಶಕ್ತನಾಗುವನು.

ಕಾಮವೊಂದು ಬಗೆಯ ಹಾವಾದರೆ, ದುರಭಿಮಾನ, ಅಹಾಂಕರ, ಅಧಿಕಾರಲಾಲಸೆ ಇವೆಲ್ಲ ಇನ್ನಿತರ ವಿಧದ ಹಾವುಗಳು. ಮನುಷ್ಯನನ್ನು ಮಣಿಗಿಸಬೇಕಾದ ಶಕ್ತಿ ಇವೆಲ್ಲವುಗಳಲ್ಲೂ ಇದೆ. ಅವುಗಳನ್ನೆಲ್ಲಾ ಬಗ್ಗಿಸ ಬಲ್ಲವನೇ ಬಾಳುವನು; ಉಳಿದವನು ಮುಳುಗುವನು.

ಇಷ್ಟೊಂದು, ವಿಷಯವನ್ನು ಕುರಿತಾಯಿತು. ಇನ್ನು ನಾಟಕವನ್ನು ಕುರಿತು. ಮನಕ್ಕಿದ್ದ ಶಕ್ತಿ ಲೇಖನಿಗೆ ಬರುವುದು ದುರ್ಲಭ. ಆ ದೋಷದಿಂದ ನನ್ನ ಲೇಖನಿಯಾದರೂ ದುರ್ಬಲವಾಗಿರಬಹುದು. ಇನ್ನು, ವಿಷಯ ವನ್ನಾಗಲಿ, ಕಥೆಯನ್ನಾಗಲಿ ಯಾರನ್ನೂ ಉದ್ದೇಶಿಸಿ ಬರೆಯಲಿಲ್ಲ. ನೋಡುವ ಮಟ್ಟಿಗೆ—"ಇವನು ಅವನು"—'ಇದು ಅದೇ'—ಎನ್ನುವ ಹಾಗೆ ತೋರಬಹುದು. ಕಾರಣ ಉಪಯೋಗಿಸಿದ ಹೆಸರುಗಳು ನಿನ್ನೆ ನಿನ್ನೆ ಕೇಳಿದುವು; ಇಂದೂ ಕೇಳುತ್ತಿರುವುವು. ಸಂಗತಿಗಳು ನಿತ್ಯವೂ ಆಗುತ್ತಿರುವುವು. ಆದರೆ ಇದು ಯಾರೊಬ್ಬನಿಗೂ ಕೈತೋರಿಸಿ ಬರೆದ ರಚನೆಯಲ್ಲ. ಆ ದೃಷ್ಟಿಯಿಂದ ಅದನ್ನು ಯಾರೂ ತಿಳಿಯಬಾರದು.

ಭಾಷೆಯಲ್ಲಿ ಹಲವು ರೂಢಿಯ ಮಾತುಗಳಿವೆ. ಕೆಲವು ನನ್ನ ಭಾವಕ್ಕೆ, ಒಪ್ಪೀತೆಂಬ ಧೈರ್ಯದಿಂದ ಬೇಕಾದ ತೆರನಲ್ಲಿ ಬಗ್ಗಿಸಿದ ನುಡಿಗಳಾಗಿರ ಬಹುದು. ನನ್ನ ಭಾವವು ಅವುಗಳಿಂದ ಬಿಂಬಿಸಿ, ಕೃತಿಯು ಸತ್ಯಕ್ಕೆ ಸಮನಾದ ಸೊಗಸನ್ನು ಅವು ನೀಡಿದಲ್ಲಿ ನಾನು ತೃಪ್ತನು. ಅದೇ ತೃಪ್ತಿಯು ಅನ್ಯರಿಗೆ ಉಂಟಾದರೆ, ನನ್ನ ಕೃತಿಯೂ ಸಾರ್ಥಕವೆಂದು ತಿಳಿಯುವೆನು.

ಪುತ್ತೂರು,<br>
೬—೧೧—೧೯೩೨.

ಇತಿ,<br>
ಶಿವರಾಮ ಕಾರಂತ.

# ವಿಷಯಾನುಕ್ರಮಣಿಕೆ.

## ಸಂಪುಟ ೧. ಹಸಿವು.



(ಬಾಲಸಾಹಿತ್ಯ ಮಂಡಲದವರಿಂದ ಪ್ರಕಟವಾದುದು.)

## ಸಂಪುಟ ೨. ಹಾವು.

# ಹಾವು.

## ೧. ಹಾವು.

ನಿಜವಾಗಿಯೂ ಅದು ಸೊಗಸಾದ ಹೂದೋಟವಿತ್ತು. ನನ್ನ ತಾಯಿಯು ನನ್ನ ಮೇಲಣ ಮಮತೆಯಿಂದ ಅತಿ ಹೆಚ್ಚಿನ ಶ್ರಮದಿಂದ ಅದನ್ನು ಮಾಡಿ ಕೊಟ್ಟಳು. ಮೊದಲಿಗೆ ಪ್ರತಿ ಗಿಡವನ್ನು ನಟ್ಟವಳು ಅವಳೇ. ಅವಳಿಗೆ ಹೂವುಗಳಲ್ಲಿ ತುಂಬಾ ಪ್ರೇಮ. ಹಸುರನ್ನು ಕಂಡರೆ ತುಂಬಾ ಆನಂದ. ಆದುದರಿಂದಲೇ ನನಗೆ ಅವಳು ಕೊಟ್ಟ ಮೊದಲಿನ ಉಡುಗೆರೆಯೆಂದರೆ ಹಸುರು ಹೂವುಗಳಿಂದ ತುಂಬಿದ ಈ ಚಿಕ್ಕ ಉದ್ಯಾನ. ಸೇವಂತಿಗೆ, ಗುಲಾಬಿ, ಮಲ್ಲಿಗೆ, ಜಾಜಿ, ಪಾರಿಜಾತ—ಪ್ರತಿ ಬಗೆಯ ಸುಗಂಧ ಕುಸುಮ ಗಳೂ ನನ್ನ ಉದ್ಯಾನದಲ್ಲಿ ಆಗುತ್ತಿದ್ದುವು. ನನ್ನ ಉದ್ಯಾನವೆಂಬ ಆಗಿನ ನನ್ನ ಹೆಮ್ಮೆಯೇ ಹೆಮ್ಮೆ.

ಬೆಳಗಾಯಿತೆಂದರೆ ನನ್ನಮ್ಮನು ನನ್ನನ್ನು ಎಚ್ಚರಿಸುವಳು. "ಮಗೂ, ತೋಟಕ್ಕೆ ನೀರೆರೆದು ಬಾ"—ಎನ್ನುವಳು. ಕೆಲವು ದಿನಗಳಲ್ಲಿ ಅವಳು ಹೇಳುವ ಮೊದಲೇ ನಾನೆದ್ದು ನೀರೆರೆಯತೊಡಗುತ್ತಿದ್ದೆ. ಕಸಬರಿಗೆಯನ್ನು ತೆಗೆದುಕೊಂಡು ಅದರ ಸಂದುಗೊಂದನ್ನೆಲ್ಲ ಗುಡಿಸಿ ಚೊಕ್ಕಟವಾಗಿರಿಸು ತ್ತಿದ್ದೆ. ಗುಡಿಸಿಯಾಗಲು, ನನ್ನೆರಡೂ ಪುಟ್ಟ ಕೈಗಳಿಂದ ನೀರ ಬಿಂದಿಗೆ ಯನ್ನು ತಂದು, ಪ್ರತಿ ಗಿಡಕ್ಕೆ ಸುರಿಯುತ್ತಿದ್ದೆ. ನೀರೆರೆದಾಯಿತಾದರೆ, ಅಲ್ಲೇ ಕುಳಿತುಕೊಂಡು ಕಳೆಯನ್ನು ಕೀಳತೊಡಗುವೆ ನನಗೆ ಅದರ ಕೆಲಸ ಮುಗಿಯಿತೆಂದು ತೋರುತ್ತಿರಲಿಲ್ಲ. ಎಷ್ಟು ಆರೈಕೆಮಾಡಿದರೂ ತೃಪ್ತಿ ಯಿಲ್ಲ. ಅದರಲ್ಲಿ ಹೂವುಗಳಾದುವೆಂದರೆ, ನನ್ನ ಒಡಲೇ ಅರಳಿದಷ್ಟು ಆನಂದ ವಾಗುತ್ತಿತ್ತು. "ದೇವರಿಗೆಂದು" ಹೇಳಿದರೂ ನನ್ನ ತೋಟದಿಂದ ಯಾರಿಗೂ ಹೂವಾರಿಸಲು ನಾನು ಬಿಡುತ್ತಿರಲಿಲ್ಲ. "ದೇವರಿಗೆ, ದೇವರಿಗೆ,"—ಎಂದು

ಮೂರು ಮೂರು ಬಾರಿ ಕೇಳುವವರಿದ್ದರು. ಆದರೆ ನನ್ನುತ್ತರವು ಅವರಿಗೆ ಇದು: "ಹೂವು ಗಿಡದ ಮೇಲಿದ್ದುದನ್ನೇ ಕಂಡು ದೇವರು ಆನಂದಿಸಲಾರ ನೇನು? ವೈತುಂಬಾ ಅವನಿಗೆ ಕಣ್ಣುಗಳಲ್ಲವೇ; ವೈತುಂಬಾ ಮೂಗುಗಳಿ ಲ್ಲವೇ" — ಎಂದು. ನನ್ನೊಡನೆ ಯಾರೂ ಚರ್ಚಿಸಲು ಬರುತ್ತಿರಲಿಲ್ಲ. ನನ್ನ ಮುದ್ದಾದ ಮರಿಗಳು ತೊಟ್ಟ ಹಳದಿ, ಕೆಂಪು, ಕಿತ್ತಿಳೆ ಹೂವುಗಳನ್ನು ಕುಯ್ಯುವುದೆಂದರೆ, ಅವುಗಳ ಗೋಣುಮುರಿದಂತೆ ಕಾಣುತ್ತಿತ್ತು. ದೇವರು ನಮ್ಮಂಥ ಸ್ವಾರ್ಥಿಯೇ! ಮಾನವರ ಮೂಗಿನ ಬಳಿಯಿದ್ದರೆ ಮಾತ್ರ ಹೂವು ಗಳಿಗೆ ಮೌಲ್ಯವೆಂದು ಅವನು ತಿಳಿಯುವನೇ?

ಎಷ್ಟೋ ದಿನ—'ಯಾರಾದರೂ ನನ್ನ ತೋಟದಿಂದ ಹೂವುಗಳನ್ನು ಕದ್ದು ಒಯ್ದರೆ—?' ಎಂಬ ಅಂಜಿಕೆಯಾದುದುಂಟು. ಅದರಿಂದ ಎಷ್ಟೋ ರಾತ್ರಿ ನಿದ್ರೆಯನ್ನು ಕಳೆದುಕೊಂಡುದೂ ಉಂಟು. ಕಾರ್ಯಾಂತರದಿಂದ, ಮನೆಯಿಂದ ನಾನು ಕಣ್ಮರೆಯಾದರೆ, ನನ್ನ ಜೀವವೆಲ್ಲ ಈ ಮುದ್ದು ಕಂದವ್ವ ಗಳ ಮೇಲೆ. ಎಲ್ಲಿ ಆಡು ಬಂದು ಮೆಲ್ಲುವುದೋ, ಎಲ್ಲಿ ತುಂಟ ಹುಡು ಗರು ಅವುಗಳನ್ನು ಮುರಿಯುವರೋ ಎಂಬ ಭೀತಿ.

ಒಂದು ದಿನ ನಾನು ನನ್ನಜ್ಜಿಯ ಮನೆಗೆ ಹೋಗಿದ್ದೆ. ಅವರ ಬಲ ವಂತದಿಂದ ಎರಡು ದಿನಗಳ ತನಕ ಮನೆಗೆ ಬರಲು ಆಗಲಿಲ್ಲ. ಅಲ್ಲಿನ ಬಾಲಕರೊಡನಾಟದಲ್ಲಿ ನನಗೆ ತೋಟದ ಮರವೆಯೇ ಆಯಿತು. ಎರಡು ದಿನಗಳ ಬಳಿಕ ಧಾವಿಸಿ ಬಂದು ನೋಡುತ್ತೇನೆ: "ನನ್ನ ಕೂಸುಗಳು, ನನ್ನ ಮುದ್ದು ಗೆಳೆಯರು ಬಾಯಾರಿ ಬಾಡಿದ್ದುವು. ನನಗೆ ತುಂಬಾ ದುಃಖವಾಯಿತು. ಓಡೋಡಿ ಬಾವಿಯಿಂದ ನೀರನ್ನು ತಂದು ಸುರಿದೆ. ಆದರೂ ಆ ದಿನ ಅವುಗಳು ನನ್ನನ್ನು ಕ್ಷಮಿಸಲಿಲ್ಲವೆಂದೇ ಕಂಡಿತು. ಅಂದಿ ನಿಂದ ನಾನು ಅವುಗಳ ಸೇವೆಯಲ್ಲಿ ತಪ್ಪಲಿಲ್ಲ.

ನನ್ನ ತೋಟವು ನನಗೆ ಮಾತ್ರ ಸಂತಸವನ್ನು ಕೊಡುತ್ತಿತ್ತೆಂದು ತಿಳಿಯದಿರಿ. ನಮ್ಮ ಕೇರಿಯವರೆಲ್ಲ, ಸಂಜೆಯಾಯಿತೆಂದರೆ ಅದರ ಬಳಿ ಹಾಕಿದ್ದ ಮರಳ ರಾಶಿಯ ಮೇಲೆ ಕುಳಿತು ಆನಂದಿಸುವರು. ತುಸು ತಂಬೆಲರು ಬೀಸಿತೆಂದರೆ ಅವರು ಮೈಮರೆಯುವರು. ಎಷ್ಟೋ ಬಾರಿ

ಪುಟ್ಟ ಕೂಸುಗಳನ್ನು ತರುವರು. ಅವುಗಳಿಗೆ ಹೂವಿನ ಆಸೆಯಾಯಿ ತೆಂದರೆ—"ಆಗದಮ್ಮಾ ತೆಗೆಯಬಾರದು"—ಎನ್ನುವರು. ನನ್ನ ತೋಟವನ್ನು ಕಂಡು, ಎಷ್ಟೋ ಚಿಕ್ಕಪುಟ್ಟ ಮಕ್ಕಳು ತಮ್ಮ ಮನೆಯ ಅಂಗಣದಲ್ಲೂ ಇಂಥ ಚಿಕ್ಕ ಹೂಗಿಡಗಳನ್ನು ನಟ್ಟುದುಂಟು.

ನನ್ನ ತೋಟದಿಂದ ನನ್ನ ಕೇರಿಯವರಿಗೇನು, ಊರ ಹಕ್ಕಿ ಪತಂಗಗಳಿಗೆಲ್ಲಾ ಆನಂದವೇ! ನನ್ನ ಕಂದಮ್ಮಗಳು ಬಿಡುವ ಹೂವಿನ ಬಣ್ಣಗಳನ್ನು ತೊಟ್ಟ ಹಲವು ಪತಂಗಗಳು ಬಂದು ಕುಣಿಯುವುವು. ಇನ್ನು ಎಷ್ಟೋ ಚಿಕ್ಕಪುಟ್ಟ ಹಕ್ಕಿಗಳು ಬಂದು ಅದರ ಬಳಿ ಕುಣಿದಾಡುವುವು. ಬೆಳಗು ಸಂಜೆಗಳಲ್ಲಿ ತಪ್ಪದೆ ಅವುಗಳ ಹಾಡು ಅಲ್ಲಿಂದ ಕೇಳಿಸುತ್ತಿತ್ತು.

ಆದರೆ ಇದೆಲ್ಲ ಅಂದಿನ ಕಥೆ. ಅಂದಿನ ಚೆಲುವು ಇಂದು ನಿಜಕ್ಕೂ ನನ್ನ ತೋಟಕ್ಕಿಲ್ಲ. ಅಂದಿನದು ನಿಜ ಅರಮನೆಯಾದರೆ ಇಂದಿನದು ಬರೇ ಕನಸಿನ ಅರಮನೆ.

ಅದೊಂದು ದಿನ. ನನ್ನ ನೆರೆಮನೆಯ ಬಾಲಕನೊಬ್ಬನು ನನ್ನನ್ನು ತಮ್ಮ ಮನೆಗೆ ಬರಹೇಳಿದನು. ಅಲ್ಲವನು ನನಗೆ ನಾನಾ ಬಗೆಯ ಆಟಗಳನ್ನು ಕಲಿಸಿದನು. ನಾನು ಅವನ ಕೃತ್ರಿಮ ಆಟಗಳಲ್ಲೆ ಭ್ರಮಿತನಾದೆ. ಅವೇ ಹರುಷದಾಯಕವೆಂದು ತಿಳಿಯತೊಡಗಿದೆ. ಸಂಜೆ ಬೆಳಗುಗಳಲ್ಲಿ ವಿರಾಮ ದೊರೆಯಿತೆಂದರೆ, ಅವನನ್ನು ಕಟ್ಟಿಕೊಂಡು ಎಲ್ಲೆಲ್ಲಿ ಅಲೆದಾಡುತ್ತಿದ್ದೆ. ಅದರಿಂದ ತೋಟದ ಮೇಲಿನ ಮಮತೆಯೇ ತಗ್ಗಿತು. ಒಂದು ದಿನ ಅದು ಸಂಪೂರ್ಣ ನಶಿಸಿಹೋಯಿತು. ಇದೇ ಸಮಯ ನನ್ನ ಅಮ್ಮನಿಗೆ ದೃಷ್ಟಿಯು ಲೋಪವಾಯಿತು. ಇಲ್ಲವಾದರೆ ನನ್ನ ತೋಟದ ದುರವಸ್ಥೆಯು ಅವಳ ಕಣ್ಣಿಗೆ ಬಿದ್ದು ಅವಳಾದರೂ ನನ್ನನ್ನು ಎಚ್ಚರಿಸುತ್ತಿದ್ದಳೋ ಏನೋ. ಅದೂ ಇಲ್ಲದಾಯಿತು. ನಾನು ಜೀನುಕಡಿವಾಣಗಳಿಲ್ಲದ ಕುದುರೆಯಾದೆ.

ನಮ್ಮ ನೆರೆಹಿತ್ತಿಲಿನವರು ತೀರ ಆಲಸಿಗಳು. ಅವರ ಹಿತ್ತಿಲು ತುಂಬ ಒಂದು ಬಗೆಯ ನಾಚುಗೆ ಮುಳ್ಳಬೀಳುಲು ತುಂಬಿತ್ತು. ಆದರ ಬೀಳಲೊಂದು ನಮ್ಮ ತೋಟಕ್ಕೂ ಬಂದಿತು. ಒಂದು ವರುಷದೊಳಗಾಗಿ ನನ್ನ ತೋಟವನ್ನೆ ನುಂಗಿಬಿಟ್ಟಿತು. ಪಾಪ, ನನ್ನ ಕಂದಮ್ಮಗಳು ಎಷ್ಟು ಗೋ

ಳಿಟ್ಟುವೋ ಏನೋ! ಆದರೆ ಯಾರು ಕೇಳಬೇಕು? ನನ್ನ ಧ್ಯಾನವೆಲ್ಲ ಹೊರಗೆ ಚಲಿಸುತ್ತಿತ್ತು. ನನ್ನದೆಂಬ ತೋಟವೊಂದಿತ್ತು .. ಎಂಬ ನೆನವರಿಕೆಯೂ ನನಗಿಲ್ಲದಾಯಿತು. ನಾನೇ ಇಷ್ಟು ಉದಾಸೀನನಾಗಲು, ನನ್ನ ತೋಟವನ್ನು ಕಾಣಲು ಬರುವವರಾರು? ಊರು ಕೇರಿಯವರೆಲ್ಲ ಎಲ್ಲೆಲ್ಲಿ ಹೋದರೋ. ಅಂತು ಅವರು ಬಂದು ವಿಶ್ರಮಿಸುತ್ತಿದ್ದ ಮರಳುದಿನ್ನೆಗಳಲ್ಲಿ, ಕಾಡುಪೊದೆಗಳು ಬೆಳೆದು ಆಡುಗಳ ಒಂದು ಮೇಯುವ ನೆಲೆಯಾಯಿತು!

ಒಂದು ದಿನ ಒಬ್ಬ ಮಿತ್ರರು ಬಂದು—"ನಿನ್ನ ಹೂವುಗಳ ಚೆಂದವನ್ನು ದೇವರು ಗುಡಿಯಿಂದಲೇ ಕಂಡು ಹರುಷಪಡುತ್ತಿರುವನು" ಎಂದರು! ನಾನವರ ಮಾತನ್ನು ಕಿವಿಯ ಮೇಲೇರಿಸಿಕೊಳ್ಳಲೇ ಇಲ್ಲ. ನನ್ನ ಸುಖವೆಲ್ಲಾ ತೋಟವನ್ನು ಮಿಕ್ಕಿತ್ತು.

ಒಂದು ದಿನ ನಡೆನಡೆದು ಬಲು ಆಯಾಸವಾಗಿತ್ತು. ಮನೆಯ ಕಡೆಗೆ ಬಂದೆ. ಬಂದವನು ನನ್ನ ತೋಟವಾಗಿದ್ದ ಸ್ಥಳದ ಬಳಿ ದಣಿವಾರಿಸಲೆಂದು ಕುಳಿತೆ. ಮೊದಲಿನ ಕಾಲವಾಗಿದ್ದರೆ ನಾನಲ್ಲಿ ಕ್ಷಣಕಾಲ ನಿಲ್ಲುತ್ತಿರಲಿಲ್ಲ. ಕುಳಿತವನಿಗೆ ಚಿಕ್ಕ ಝೋಂಪು ಹತ್ತಿತ್ತು. ನಿದ್ರೆ ತೂಗುತ್ತಿದ್ದ ನನ್ನನ್ನು ಏನೋ ಕಡಿದಂತಾಯಿತು. "ಅಯ್ಯೋ" ಎಂದು ಚೀರಿದೆ. ಕಣ್ಣೆದುರಿಗೆ ನನ್ನನ್ನು ಕಡಿದ ಹಾವು ಬುಸುಗುಟ್ಟುತ್ತ, ನನ್ನ ತೋಟದ ಮುಳ್ಳು ಬೇಳಲಿನೆಡೆಯನ್ನು ಸೇರಿತು. ನನಗೆ ಸಾಯುವೆನೆಂಬ ಭೀತಿಯಾಯಿತು. "ಅಮ್ಮಾ, ಅಮ್ಮಾ" ಎಂದು ಚೀರಿದೆ. ನನ್ನ ಕೂಗನ್ನು ಕೇಳಿ ತಾಯಿ ತಡವರಿಸುತ್ತ "ಮಗು, ಏನಾಯಿತು? ಏನಾಯಿತು?" ಎಂದು ಕೂಗುತ್ತ ಬಂದಳು. "ಹಾವು ಕಡಿಯಿತೆಂದೆ"— . . . ನನ್ನ ತಾಯಿ ನೆರೆಕೆರೆಯವರನ್ನು ಕೂಗಿ ಕರೆದಳು. ನಾಲ್ಕಾರು ಮಂದಿ ಬಂದರು. ವೈದ್ಯರನ್ನು ಕರೆತಂದರು. ಏನೇನೋ ಚಿಕಿತ್ಸೆಯನ್ನು ಮಾಡಿದರು. ಬಲುವಾದ ಸಂಕಟವನ್ನು ಅನುಭವಿಸಿದೆನು. ಒಂದು ದಿನ ಸರಿದ ಬಳಿಕ ನನಗೆ ಚೇತನವಾಯಿತು. ಆರೋಗ್ಯವೂ ಬಂದಿತು. ಅಲ್ಲಿಯ ತನಕ ನನ್ನ ಅವ್ವನು ನನ್ನನ್ನು ಮಾತನಾಡಿಸಲಿಲ್ಲ. ನಾನು, ಆರೋಗ್ಯಗೊಂಡುದನ್ನು ಕಂಡು ಹರ್ಷಿತಳಾಗಿ ನನ್ನನ್ನು

ಬಳಿಗೆ ಕರೆದು—"ಮಗು, ಹಾವು ಎಲ್ಲಿಂದ ಬಂದಿತು? ಇದುವರೆಗೆ ನಮ್ಮ ತೋಟದಲ್ಲಿ ಹಾವು ಬಂದುದನ್ನು ನಾನು ಕೇಳಿರಲಿಲ್ಲ"—ಎಂದಳು.

"ಹೂದೋಟದಿಂದ"—ಎಂದೆ.

ಅವಳಿಗೆ ಮತ್ತಷ್ಟು ಆಶ್ಚರ್ಯವಾಯಿತು. "ಮಗು, ಹೂದೋಟದಲ್ಲಿ ಹಾವೆಂದರೇನು? ಒಂದು ಕಳೆಯೂ ಹುಟ್ಟದಂತೆ ಕಾಪಾಡಿದ ಹೂದೋಟದಲ್ಲಿ ಹಾವೇ" ಎಂದಳು.

ಆಗ ನನಗೆ ಹೊಳೆಯಿತು. ನನ್ನ ಹೂದೋಟವು ಕಣ್ಮರೆಯಾಗಿ, ಅಲ್ಲಿ ಮುಳ್ಳುಗಿಡಗಳೆಲ್ಲಾ ಬೆಳೆದು ಆ ವಿಷಜಂತುವಿಗೆ ಎಡೆಕೊಟ್ಟತೆಂದು. ಅಮ್ಮನು ಪ್ರೇಮದಿಂದ ಮಾಡಿಕೊಟ್ಟ ಹೂದೋಟವನ್ನು ಹಾಳುಮಾಡಿದೆನಲ್ಲ ಎಂದು ದುಃಖವಾಯಿತು. ಅದಕ್ಕಾಗಿ ಬಳಬಳನೆ ಕಣ್ಣೀರನ್ನು ಸುರಿಸಿದೆ. ನನ್ನ ಉಕ್ಕುತ್ತಿದ್ದ ದುಃಖದ ಪರಿಚಯವು ಅವಳಿಗಾಯಿತು. "ಏನು, ಏಕೆ ಅಳುತ್ತಿರುವೆ" ಎಂದು ಕೇಳಿದಳು. ಎಲ್ಲವನ್ನೂ ಹೇಳಿದೆನು. ನನಗೂ ಮೀರಿದ ದುಃಖ ಅವಳಿಗಾಯಿತು. "ಮಗೂ, ನೀನಿಷ್ಟು ಮೈಮರೆಯುವಿ ಯೆಂದು ನಾನು ತಿಳಿದಿರಲಿಲ್ಲ"—ಎಂದಳು. "ಇನ್ನೆಂದೂ ಹಾಗೆ ಉದಾ ಸೀನನಾಗಿರಲಾರೆ. ತಿರುಗಿ ನನ್ನ ಹೂದೋಟವನ್ನು ಸರಿಪಡಿಸುವೆ"ನೆಂದು ವಚನವಿತ್ತೆ. ನನ್ನ ಪಶ್ಚಾತ್ತಾಪವನ್ನು ಕಂಡು ಅವಳಿಗೆ ಸಂತಸವಾಯಿತು. ಅಂದೇ ಕಾಡುಬೆಳೆದ ಬೀಳಲುಗಳನ್ನು ಕಡಿದು ಸವರಿದೆ.

ಪಾಪದ ನನ್ನ ಕಂದಮ್ಮಗಳು ಅವುಗಳೆಡೆಯಲ್ಲಿ ಸಿಕ್ಕಿ, ಅನ್ನ ನೀರಿಲ್ಲದೆ ಕಂಗೆಟ್ಟು ಕಡ್ಡಿಯಾಗಿದ್ದುವು. ಸೇವಂತಿಗೆಯಂತು ಸತ್ತೇ ಹೋಗಿತ್ತು. ತಿರುಗಿ ಅವುಗಳನ್ನು ಆರೈಕೆಯಿಂದ ಚೇತನಗೊಳಿಸುವುದು ಅಸಾಧ್ಯವೆಂಬಷ್ಟಾ ಯಿತು. ಈಗೇನೋ ಅವು ತುಸು ಜೀವಕಳೆಯನ್ನು ಹಿಡಿದು ಎದ್ದುನಿಂತಿವೆ. ಇನ್ನೆಂದಿಗೂ ನಾನವುಗಳನ್ನು ಮರೆಯುವಂತಿಲ್ಲ. ಆದರೇನು? ಎಷ್ಟು ಎಚ್ಚರದಿಂದ ಅವನ್ನು ರಕ್ಷಿಸಿಕೊಂಡು ಬಂದರೂ ನನ್ನ ಉದ್ಯಾನದ ಅಂದಿನ ಶೋಭೆ ಕನಸಿನ ಗಂಟೇ ಸರಿ!

---

## ೨. ಚಕ್ರ ತಿರುಗಿತು.

ಜನ್ನುವು ಏತಕ್ಕೋ ಏನೋ, ಸುಬ್ಬರಾಯರ ಮನೆಗೆ ಹೋಗಿದ್ದನು. ಮಾತುಮಾತನಾಡುತ್ತ, ವಿಷಯವು "ತರಕಾರಿ ಈ ಸಮಯ ಸಿಗುವುದೇ ಇಲ್ಲವಲ್ಲ" ಎಂಬಲ್ಲಿಂದ ತೊಡಗಿ, ಕೋರ್ಟುಕಛೇರಿಗಳ ಮೇಲೆ ಹಾದು, ಕೊನೆಗೆ "ಅಹುದೋ ಜನ್ನು, ನಿನ್ನ ಹುಡುಗ ಪರೀಕ್ಷೆಯಲ್ಲಿ ಪಾಸೇ"— ಎಂಬಲ್ಲಿಗೆ ಹಾರಿತು. ಅದಕ್ಕೆ ಜನ್ನುವು—"ಅಹುದು, ಪಾಸಂತೆ. ಇಂದು ಕಾಗದ ಬಂದಿದೆ" ಎಂದುತ್ತರವಿತ್ತನು. "ಬೇರೆ ಏನು ಸುದ್ದಿಯಿಲ್ಲವೇ? ನಮ್ಮ ರಾಜನ ವಿಚಾರ?" ಎನ್ನಲು, ತಿರುಗಿ ನುಡಿದನು: "ಅದು ನಿಮಗೆ ತಿಳಿ ದಿರಬಹುದೆಂದು ಸುಮ್ಮನಿದ್ದೆ. ಅವನು ಪರೀಕ್ಷೆಯಲ್ಲಿ ಎಲ್ಲರಿಗೂ ಮೇಲಾಗಿ ತೇರ್ಗಡೆಯಾಗಿರುವನೆಂದು ಬರೆದಿದ್ದನು. ನನಗೆ ನನ್ನ ಹುಡುಗನ ವಿಷಯ ದಲ್ಲಿ ಧೈರ್ಯವೇ ಇದ್ದಿರಲಿಲ್ಲ. ಎಲಿಮಂತ್ರಿ ಲೆಕ್ಕವಂತೆ, ಏನು ಸುಟ್ಟ ಲೆಕ್ಕವೋ ಅದು, ಅದರಲ್ಲಿ ಏನಾಗುತ್ತದೋ ಎಂದಿದ್ದನು. ಅವನ ಉಪಾಧ್ಯಾಯರೊಮ್ಮೆ ಸಿಕ್ಕಿದಾಗ "ಏನು ಸ್ವಾಮಿ, ನಿಮ್ಮ ಹುಡುಗ ಲೆಕ್ಕದಲ್ಲಿ ಇಷ್ಟು ಹಿಂದೆ?"—ಎಂದು ಕೇಳಿದರು. ಹೀಗಾಗಿ ನನಗೂ ಧೈರ್ಯವಿರ ಲಿಲ್ಲ. ಒಟ್ಟಾರೆ, ಆ ಮಹಾಲಿಂಗೇಶ್ವರನ ಕೃಪೆಯೆಂದು ಕಾಣುತ್ತದೆ. ಹುಡುಗ ಅಂತು ಇಂತು ಪಾಸಾದನು. ಇನ್ನು ದೇವರು ಈ ವರುಷವೂ ಹಾಗೆ ಯೇ ನಡೆಯಿಸಿಬಿಟ್ಟರೆ . . . ."—ಎಂದು ಪುರಾಣ ತೊಡಗಿದನು. ಸುಬ್ಬ ರಾಯರು ತಿರುಗೊಮ್ಮೆ ಪ್ರಶ್ನಿಸಿದ್ದು ಇವನ ಹುಡುಗ ಭೃಗು*ವಿನ ಪುರಾಣ ಕೇಳಲಿಕ್ಕಲ್ಲ. ಅವನ ನೆಪದಿಂದ ತಮ್ಮ ಮಗ ರಾಜನ ಸ್ತುತಿಪಾಠಕ್ಕೆ. ಸುಬ್ಬರಾಯರಿಗೆ ಇರುವ ಹುಡುಗನೆಂದರೆ, ಸಂತತಿಯೆಂದರೆ, ಅವನೇ ಒಬ್ಬನು. ವಯಸ್ಸು ೨೦ ಇರಬಹುದು. ಈ ವರುಷ ಅವನು ಮೆಟ್ರಿ ಕ್ಕೋ S. S. L. C.ಯಲ್ಲೋ ಕಲಿಯುತ್ತಿರುವನು. ಸುಬ್ಬರಾಯರಿಗೆ ರಾಜನೆಂದರೆ ಸರ್ವಸ್ವ. ಹುಡುಗನಿಗೆ ಎಂಟು ವರುಷವಾಗುವ ವರೆಗೆ

---

*ಭೃಗು ಎಂಬುದು ಹೆದ್ದರಿಗೊಪ್ಪಿಸುವ ಬಿರುದೂ ಅಹುದು.

ಸಾಲೆಯ ಗಾಳಿ ಸೋಂಕಲು ಬಿಡಲಿಲ್ಲ. ಆ ಮೇಲೆ ಉಪಾಯವಿಲ್ಲದೆ ಹುಡುಗನನ್ನು ಹಳ್ಳಿಯ ಸಾಲೆಗೆ ಹಾಕಿದರು. ಅವನನ್ನು ಒಂದುಕ್ಷಣ ಬಿಟ್ಟಿರಲು ಅವರಿಂದ ಸಾಧ್ಯವಿಲ್ಲ. ಸಾಲೆಗೆ ಬಿಟ್ಟುಬರಲು ಹೋಗುವುದೂ ಅವರೇ, ತಿರುಗಿ ಕರೆದು ತರಬೇಕು ಅವರೇ.

ಹಳ್ಳಿಯ ವಿದ್ಯೆಯು ಮುಗಿಯಿತು. ಇನ್ನು ಹ್ಯಾಸ್ಕೂಲಿಗೆ ಅವನನ್ನು ಸೇರಿಸಲು ಯೋಚಿಸಿದರು. ಹುಡುಗನನ್ನು ಪೇಟೆಗೆ ಕಳುಹಿಸಿಕೊಟ್ಟು ಅಗಲಿರುವುದು ಅಸಾಧ್ಯವೆಂದೇ ತೋರಿತು. ಅದಕ್ಕಾಗಿ, ವಿದ್ಯೆ ಬೇಡವೆಂದೇ ತೋರಿತು. ಆದರೆ ಮಗನನ್ನು ಕಡಿಮೆ ಕಡಿಮೆ—"ಬಿ. ಬಿ. ಯಲ್." ಪರೀಕ್ಷೆಮಾಡಿಸಿ—ತನ್ನ ಕರುಳಿಗೆ ತಂಪು ಹುಟ್ಟಿಸಬಲ್ಲ ವಕೀಲ ವೀರಾಗ್ರಣಿ ಯನ್ನಾಗಿ ಮಾಡಬೇಕೆಂಬ ಭಾರೀ ಅಭಿಲಾಷೆ ಒಂದಿತ್ತು. ಈ ಎರಡರ ಸಂಕಟಕ್ಕೆ ಸಿಕ್ಕಿ ನರಳಿದರು. ಕೊನೆಗೆ ಅಭಿಲಾಷೆಯೇ ಗೆದ್ದಿತು. ಇನ್ನು ಮಂಗಳೂರಿನಲ್ಲಿಯೇ ಹುಡುಗನಿಗಾಗಿ ಬಿಡಾರ ಮಾಡುವಾ ಎಂದು ಎಣಿಸಿ ದರು. ಅದು ಅವರ ಮನೆಯಾಕೆಗೆ ಸರಿತೋರಲಿಲ್ಲ. ಆ ಹೆಂಗುಸಿಗೆ ಆಸ್ತಿಮನೆ ಬಿಟ್ಟಿರುವುದರಿಂದ ಕ್ಷೇಮವಿಲ್ಲೆಂದು ತಿಳಿವು. ಹೀಗಾಗಿ ಉಪಾಯ ವಿಲ್ಲದೆ ಆ ಯೋಚನೆಯನ್ನು ಬಿಟ್ಟು, ಹಾಸ್ಟೆಲಿಗೆ ಹುಡುಗನನ್ನು ಸೇರಿಸಿದರು. ಈಗವನು ನಗರಕ್ಕೆ ಕಾಲಿಟ್ಟು ಐದು ವರುಷಗಳು ಸಂದಾಯಿತು. ಸುಬ್ಬ ರಾಯರು ಮೊದಲು ವಾರಕ್ಕೊಮ್ಮೆಯಾದರೂ ಮಂಗಳೂರಿಗೆ ಹೋಗಿ ಬರುತ್ತಿದ್ದರು. ಈಗ ಹುಡುಗನ ಗಡಸುತನವನ್ನು ಕಂಡು ಅಷ್ಟು ಆತುರ ಪಡುವುದಿಲ್ಲ. ಆದರೆ ರಜೆಗೆಲ್ಲಾದರೂ ಮನೆಗೆ ಬಂದರೆ, ಅದು ದೊಡ್ಡ ರಜೆ ಯಾದರೂ ಸರಿಯೆ, ಅದಕ್ಕೊಂದು ಮರಿರಜೆಯನ್ನು ಸೇರಿಸದೆ ಬಿಡುತ್ತಿರಲಿಲ್ಲ. ಇನ್ನು ಹುಡುಗನ ಸುಖಕ್ಕಾಗಿ, ತುಪ್ಪ, ತಿಂಡಿತಿನಸುಗಳ ವಿಶೇಷ ವ್ಯವಸ್ಥೆ ಯಿತ್ತೆಂದು ಹೇಳಬೇಕಾಗಿಲ್ಲವಷ್ಟೆ.

ನಿಜಕ್ಕೂ ರಾಜುವಿನ ಕೀರ್ತಿ ಅವನ ತಂದೆಯ ಬಾಯಿಯಿಂದಲೇ ಕೇಳತಕ್ಕದು. ಎದುರಿಗೆ ಜನ್ನುವು ಕುಳಿತಿದ್ದನು. ರಾಯರು ಬಾಯಿ ತೆರೆದರು. "ನೋಡು ಜನ್ನು, ನಮ್ಮ ರಾಜನ ವಿಷಯ ನನಗಿಷ್ಟಿಷ್ಟು ವ್ಯಥೆ ಯಿಲ್ಲ. ಅವನ ಜಾತಕದ ಫಲವೆಂಥದು ಬಲ್ಲೆಯ? ಬಾಯಿತೊಳೆದು ಆಡ

ಬೇಕು ಅದನ್ನು. ಅವನು ಹುಟ್ಟಿದ ಗಳಿಗೆ ಅಷ್ಟು ದಿವ್ಯವಾಗಿದೆಯಂತೆ! ನಮ್ಮ ಶಾಸ್ತ್ರಿಗಳೇ ಅನ್ನುತ್ತಾರೆ. ಆ ಹುಡುಗನ ಜಾತಕಕ್ಕೆ ಸರಿಯಾದ ಜಾತಕ, ಸತ್ತರೂ ಕಾಣಸಿಗಲಿಕ್ಕಿಲ್ಲ—ಎಂದು. ನಿಜ. ನೋಡು! ಒಂದು ಪರೀಕ್ಷೆಯಲ್ಲಿ ಅವನು ಫೆಯಿಲು, ಫೆಯಿಲಿನ ಮಾತು ಬಿಡು, ಎರಡನೇ ಬಂದದ್ದುಂಟೇ? "ಫಸ್ಟ್" ಅನ್ನುವ ಪಟ್ಟ ಅವನಿಗಾಗಿಹೋಯಿತು ನೋಡು. ಅವನು ಆ ಶಾಲೆಯಲ್ಲಿರುವಷ್ಟು ದಿನ ಉಳಿದ ಹುಡುಗರಿಗೆ ಫಸ್ಟ್ ಬರುವ ಯೋಚನೆ ಈ ಜನ್ಮಕ್ಕಿಲ್ಲ! ಈಗಲೇ ಬೇಕಾದರೆ ಭವಿಷ್ಯ ಹೇಳಿಬಿಡುತ್ತೇನೆ. ಮೆಟ್ರಿಕ್ಯು ಪರೀಕ್ಷೆಯಲ್ಲಿ ಅವನು ಫಸ್ಟ್ ಬಾರದಿದ್ದರೆ ನನ್ನ ಮೀಸೆ ತೆಗೆಯುತ್ತೇನೆ. ಆದರೆ ಒಂದು ಚಿಂತೆ ಮಾತ್ರ ತಪ್ಪದು. ಈ ವರುಷ ಅವನಿಗೊಂದು ಲಗ್ನ ಮಾಡಿಸಲೇಬೇಕು ನೋಡು. ಒಂದು ನೂರು ಜಾತಕವಾಯಿತು ಬಂದದ್ದು. ಸ್ವತಃ ನಮ್ಮ ತಹಶಿಲ್ದಾರರು ತಮ್ಮ ಮಗಳ ಜಾತಕ ಹಿಡಿದುಕೊಂಡು ನಮ್ಮ ಮನೆಬಾಗಲಿಗೆ ಬಂದರು. ಹುಡುಗನನ್ನು ಕೇಳದೆ ಯಾವುದೂ ಸಾಧ್ಯವಿಲ್ಲೆಂದು ಬಿಟ್ಟೆ. ಈ ನವರಾತ್ರಿ ರಜೆಗೆ ಮನೆಗೆ ಬಂದರೆ ಮದುವೆಯೊಂದು ನಿಶ್ಚಯಮಾಡಿ ಹುಡಿಹಾರಿಸಿ ಬಿಡಬೇಕು"—ಎಂದರು.

ಜನ್ನುವಿಗೆ ಈ ಪುರಾಣ ಕೇಳಿ ಸಾಕಾಯಿತು. ಅಷ್ಟಕ್ಕೆ ತನ್ನ ಮನೆಯ ನೆನಪಾಗಿ ಹೆಜ್ಜೆ ತೆಗೆಯಲು ಯೋಚಿಸಿದನು. ಅವನು ಎದ್ದುದನ್ನು ಕಂಡು ರಾಯರು—"ನಿಲ್ಲಯ್ಯ, ಏನು ಅವಸರ? ಅದಿರಲಿ, ಮೆಟ್ರಿಕ್ಯು ಆದ ಮೇಲೆ ನಿನ್ನ ಹುಡುಗನನ್ನು ಏನು ಮಾಡುತ್ತೀ ಹೇಳು" ಎಂದರು.

"ಏನೆಂದು ಹೇಳಲಿ! ಮೊದಲು ಮೆಟ್ರಿಕ್ ಆಗಲಿ."

"ಅದು ಇಂದಲ್ಲ ನಾಳೆ ಆಗುತ್ತದೆ ಬಿಡು. ಆದಮೇಲೇನು ವಿಚಾರ? ಸುಮ್ಮನಿರುವುದಕ್ಕೆ ಬರುತ್ತದೆಯೇ?"

"ಏನೆಂದೇ ತಿಳಿಯದು ಸ್ವಾಮಿ. ಹುಡುಗನಿಗೆ ಮುಂದರಿಸುವ ಮನಸ್ಸಿದೆ. ಆದರೆ ಹಣಕ್ಕೆಲ್ಲಿ ಭಿಕ್ಷೆಯೆತ್ತಬೇಕು? ಎಲ್ಲಾದರೂ ವೇತನ ದೊರೆತರೆ ಆಗಬಹುದೋ ಏನೊ?"

"ವೇತನ ಎಲ್ಲಿ ದೊರೆಯುತ್ತದೆ ಜನ್ನು? ನೀನೆ ಅನ್ನುತ್ತಿ, ಹುಡುಗ ಎಲಿಮಂತ್ರಿಯಲ್ಲಿ ಸ್ವಲ್ಪ ಅಷ್ಟಷ್ಟೆ ಎಂದು. ಹಾಗಿದ್ದರೆ ಹೇಗೆ? ಪಕ್ಕಾ

ಹುಡುಗರಿಗಲ್ಲದೆ 'ಚಿಲ್ಲರೆಪಲ್ಲರೆ'ಗಳಿಗೆ ವೇತನ ಸಿಗುತ್ತದೆ ಎಂದು ಎಣಿಸಿದೆಯಾ?"

"ಅಹುದು; ಏನೋ ಸ್ವಾಮಿ, ಅವನ ಹಣೆಮೇಲೆ ಬರೆದ ಹಾಗೆ ಆಗುತ್ತದೆ"—ಎಂದು ಜನ್ನು ಹೊರಟೇ ಹೋದನು. ಅವನು ಅದೃಶ್ಯವಾಗಲು ರಾಯರಿಗೆ ನಗೆ ಉಕ್ಕಿಬಂದಿತು. ರಾಯರ ಬಳಿ ಕುಳಿತ ಒಬ್ಬ ಆಶ್ರಿತ ಭೂಪತಿಯು—"ಸ್ವಾಮಿ, ನವಿಲು ಕುಣಿಯುತ್ತದೆಂದು ಕಾಗೆಯೂ ಕುಣಿಯುತ್ತದಂತೆ! ಇವನ ಮಗನಿಗೆ ಬಿ. ಎ. ಆಗಬೇಕೆಂಬ ಆಸೆಯಿದೆ. ನಿಜಕ್ಕೂ ಬಿ. ಎ. ಆದರೆ, ಆ ಮೇಲೆ ಅವನು ಊರಿಡಲಿಕ್ಕಿಲ್ಲ"—ಎಂದು ಟೀಕಿಸಿದನು. ರಾಯರೂ ಪ್ರಸನ್ನರಾಗಿ "ರಾಘು, ನಿನಗೆ ಭ್ರಮೆಯೇನು? ಮೊದಲು ಆ ಹುಡುಗ ಮೆಟ್ರಿಕ್ ಆಗಲಿ! ಒಂದು ಯುಗ ಬೇಕು ಅದನ್ನು ಪಾಸಾಗಲು. ಸರಕಾರದ ಪರೀಕ್ಷೆಯದು; ಬಿಮ್ಮಗೆ ಇದೆ."

ಅಲ್ಲಿಗೇಕೋ ರಾಯರ ಪುರಾಣ ಮುಗಿಯಿತು. ವಿಷಯವು ಅಲ್ಲಿಂದ ಕುಪ್ಪಳಿಸಿ ಹಾರಿ ಮದುವೆ ವಿಚಾರದ ಮೇಲೆ ಕುಳಿತುಬಿಟ್ಟಿತು. ತಿರುಗಿ ರಾಯರು ತೊಡಗಿದರು ರಾಜುವಿನ ಯೋಗ್ಯತೆಗೆ, ತಮ್ಮ ಅಂತಸ್ತಿಗೆ ತಕ್ಕ ಕನ್ಯೆ ತನ್ನ ಕಣ್ಣಿಗೆ ಕಾಣಿಸದೆಂದರು. ಏನೋ, ತಹಶಿಲ್ದಾರರ ಹುಡುಗಿ 'ತಕ್ಕಮಟ್ಟಿಗೆ ಇತ್ತಂ'ತೆ! ಅವರೂ ಆಫೀಸರರು! ಆದರೆ ಹಣವಿಲ್ಲ; ಜಮೀನಿಲ್ಲ. ಪೆನ್ಶನು ಸಮೀಪಿಸಿತು. ಮುಂದೆ, ತಹಶಿಲ್ದಾರರಾದರೇನು? ಮೂಸುವವರಿಲ್ಲ. ಆದರೆ ಅವರೇನೋ ಹುಡುಗಿ ನೆರೆಯಿತೆಂದು, ಬಹಳ ಒತ್ತಾಯ ಮಾಡುತ್ತಾರಂತೆ! ಸೂಚನೆ ರಾಜುವಿಗೂ ಮುಟ್ಟಿರಬಹುದು.

ರಾಜು ಹೆಸರಿಗೆ ತಕ್ಕಂತೆ ರಾಜನೇ ಅವನು. ಉಡುಗೆ ತೊಡುಗೆ, ಠೀವಿ, ಮಾತುಕಥೆ ಎಲ್ಲವೂ ಗಂಭೀರವಾಗಿಯೇ ಇದ್ದುವು. ಹಾಸ್ಟೆಲಿನಲ್ಲಿ ಅವನಿಗೆ ಸರಿಸಮ ಬಾಲಕರಿಲ್ಲ. ಅವನಂತಹ ದರ್ಬಾರಿಯೂ ಯಾರಿಲ್ಲ. ಈ ವರುಷ ಪಾಸಾದುದಕ್ಕೆ ತನ್ನ ಸಹಪಾಠಿಗಳೆಲ್ಲರಿಗೂ ಔತಣವಿತ್ತನು. ಅವನನ್ನು ಹಿಂಬಾಲಿಸುವ ಬಾಲಕರೂ ಹಲವರು. ಅದರಿಂದ ಅವರಿಗೆ ಲಾಭವಿತ್ತು. ಏನಿಲ್ಲವಾದರೂ ಭೇಟಿಯಾದಾಗ ಒಂದು ಸಿಗರೇಟು, ತುಸು ಹೊತ್ತು ಕಳೆದರೆ ಉಪಾಹಾರ! ಇಷ್ಟರ ತನಕ ವ್ಯಾಸಂಗದಲ್ಲಿಯೂ ಚತುರ

ನಾಗಿಯೇ ಇದ್ದನು. ಅಂದರೆ ಬಹಳ ಓದುತ್ತಿರುವ ರೂಢಿಯಿಲ್ಲ. ಮಿದುಳು ಚುರುಕಾಗಿದ್ದುದರಿಂದ, ಒಮ್ಮೆ ಕೇಳಿದ ವಿಷಯ ಮರೆಯುವಂತಿದ್ದಿರಲಿಲ್ಲ. ಹೀಗಾಗಿ ಗೆಳೆಯರಿಗೆ ಮುದ್ದಾದಂತೆ ತನ್ನ ಉಪಾಧ್ಯಾಯರ ಪ್ರೀತಿಗೂ ಪಾತ್ರನಾಗಿದ್ದನು. ಅವನಲ್ಲಿರುವ ಯೋಗ್ಯತೆಗಿಂತಲೂ, ಅಧಿಕ ಯೋಗ್ಯತೆ ಅವನಲ್ಲಿದೆಯೆಂದು ತಿಳಿದ ಉಪಾಧ್ಯಾಯರೂ ಇರುವರು. ಉಳಿದ ಹುಡುಗರು ಹಿಂದೆಬಿದ್ದಾಗ - "ರಾಜನನ್ನು ಕಾಣಬಾರದೇ?" ಎಂದು ಕೈಬೆರಳು ತೋರಿಸುತ್ತಲೂ ಇದ್ದರು. ಇದರಿಂದ ಅವರಿಗೂ ನಷ್ಟವಿರಲಿಲ್ಲ. ಸಂದರ್ಭ ಬಿದ್ದರೆ, ರಾಜನಿಗೆ ಒಂದು ಮಾತು ಹೇಳಿದರೆ ಸಾಕು, ಹತ್ತೆಂಟು ರೂಪಾಯಿಗಳನ್ನು ಸಹ ಎರವಾಗಿ ಕೊಡುವನು. ಸಂಸಾರ ತಾಪತ್ರಯದಲ್ಲಿ ಸಿಲುಕಿದ ಉಪಾಧ್ಯಾಯರಿಗೆ ಅದರಿಂದ ಎಷ್ಟೋ ಸಹಾಯವಾಗುತ್ತಿತ್ತು. ಇನ್ನು, ವೇಳೆಗೆ ಸರಿಯಾಗಿ ಕೊಡಲು ಬಾರದಿದ್ದರೂ, ಅಥವಾ ಕೊಡಲು ಆಗದಿದ್ದರೂ "ಸರ್, ಉಂಟೇ?" ಎಂದು ಬಾಯಿ ತೆರೆಯುವ ಅಲ್ಪ ಬುದ್ಧಿ ಅವನಿಗಿಲ್ಲ.

ಇತ್ತ ಅವನದೇ ತರಗತಿ, ಅವನದೇ ವಿದ್ಯಾರ್ಥಿಭವನದಲ್ಲಿರುವವನು ಭೃಗು. ಭೃಗುವನ್ನು ಕಂಡರೆ "ಶುದ್ಧ ಭೃಗು"—ಎಂದವನ ಗೆಳೆಯರು ನುಡಿಯುವರು. ಭೃಗು ಎಂಬುದು ಅವರ ಅರ್ಥದಲ್ಲಿ ಸತ್ತ ಹೆಣ—ಎಂದು. ಅವನಿಗಂಥ ತಲೆಯೂ ಇಲ್ಲ; ಸಂಪತ್ತೂ ಇಲ್ಲ; ಕೊಂಡಾಡುವವರೂ ಇಲ್ಲ. ಏನೋ, ಮಂದಿರದ ಒಂದು ಮೂಲೆಯಲ್ಲಿ ಪುಸ್ತಕ ಹಿಡಿದು ಕುಳಿತರೆ, ಶಾಲೆಯ ವೇಳೆಯಾಗುವ ತನಕ ಏಳಲಾರನು. ಈ ವರುಷವಂತು ರಾತ್ರಿಯಲ್ಲಿ ನಂದಾದೀಪದ ನಿಶ್ಚಯಮಾಡಿರುವನು. ಅವನ ಅಂತರಂಗದ ಅಭಿಲಾಷೆಯು ಬಹಳ. ಬಡವರ ಹುಡುಗನಾದ ತನಗೆ ಅದನ್ನು ಹೊಂದಲು ಸಾಧ್ಯವಿಲ್ಲೆಂಬ ಸಂಶಯವೂ ಇದೆ. ಆದರೆ ಉದ್ಯಮವನ್ನು ಬಿಡುವುದೂ ಇಲ್ಲ; ಆಸೆಯನ್ನು ಬಿಡುವುದೂ ಇಲ್ಲ. ಇವನ ಪರಿಶ್ರಮವನ್ನು ಕಂಡು ಅವನ ಗೆಳೆಯರು ರಾಜನನ್ನು ಕರೆದು—"ರಾಜು, ಈ ಬಾರಿ ಪರೀಕ್ಷೆಯಲ್ಲಿ ಭೃಗು ನಿನ್ನ ಮುಖಕ್ಕೆ ಮಸಿಬಳೆಯುವನು ನೋಡು. ಈಗಾಗಲೇ ಬರ್ಮಾ ಆಯಿಲ್ ಕಂಪೆನಿಯವರು ಇವನಿಂದಾಗಿ ತಮ್ಮ ಸ್ಟಾಕು ಮುಗಿಯಿತು—

ಎನ್ನುತ್ತಾರೆ"—ಎಂದು ನಗುವರು. ತಾನು ಮಿತಿಮೀರಿ ಓದುತ್ತಿರುವೆ ನೆಂದು ಅವನಿಗೂ ಗೊತ್ತು. ಈ ಹಾಸ್ಯವನ್ನು ಕೇಳಿ ಅವನೂ ನಗುವನು. ಕೆಲವು ಬಾರಿ ಪುಸ್ತಕಗಳನ್ನು ಚೆಲ್ಲಿಕೊಟ್ಟು ತಿರುಗಾಡಲು ಹೊರಡುವನು. ಸಂಜೆ ಮನೆಗೆ ಬಂದರೆ ಬೆಳಗಿನ ವೈರಾಗ್ಯವೆಲ್ಲವನ್ನು ಮರೆತು ತಿರುಗಿ ಅಭಿ ಲಾಷೆಯಿಂದ ಒದ್ದಾಡುವನು!

ಈಗ ಶಾಲೆತೊಡಗಿ ಮೂರು ತಿಂಗಳು ಸಂದುವು. ಶಾಲೆಯ ಪಾಠ ಗಳೂ ಸಾಗುತ್ತಿದ್ದುವು. ಏಕೋ, ಏನೋ-- ಉಪಾಧ್ಯಾಯರೊಬ್ಬರ ವರ್ಗಾವರ್ಗಿಯಾಗಿ 'ಸುಂದರ ಐಯ್ಯರ್' ಎಂಬೊಬ್ಬ ಹೊಸ ಮಾಸ್ತರರು ಶಾಲೆಗೆ ಕಾಲಿರಿಸಿದರು ಮೆಟ್ರಿಕ್ಕಿನ 'ಲೆಕ್ಕ'ಕ್ಕೆ ಅವರು ಗುರುಗಳಾದರು. ಅವರು ಬಂದ ಒಂದು ವಾರದಲ್ಲಿ ಹುಡುಗರಿಗೆ ಬೇಸರ ಹಿಡಿಯಿತು. ಒಂದು ತಾಸಿನಲ್ಲಿ ಹತ್ತು ಲೆಕ್ಕಗಳನ್ನು ಮಾಡಿಸಿಬಿಡುವರು ಅವರು. ರಾಜನು ಅವರನ್ನು ನಿಂದಿಸತೊಡಗಿದನು! ಹುಡುಗರಿಂದ ಈ ರೀತಿ ಕೂಲಿಮಾಡಿಸು ವುದು ಅವನಿಗೆ ಸರಿತೋರಲಿಲ್ಲ. 'ಏನಾದರೂ ನಮೂನೆಗೆ ಒಂದೆರಡು ಲೆಕ್ಕ ಗಳನ್ನು ತೋರಿಸುವುದರ ಬದಲು, ಇವರು ಪ್ರತಿಯೊಂದನ್ನು ಮಾಡಹೇಳು ತ್ತಾರೆ'—ಎಂಬ ಪಿಸುಮಾತುಗಳು ಹೊರಟುವು. ಈ ಅಸಂತೃಪ್ತಿಯ ಜತೆ ಯಲ್ಲಿ ಇನ್ನೊಂದು ಪ್ರಸಂಗವೂ ಬಂದಿತು. ಒಂದು ದಿನ ಸುಂದರ ಐಯ್ಯರರು— "ರಾಜ, ನೀನು ಬಹಳ ಜಾಣನೆಂದು ತಿಳಿದುಕೊಂಡಿರಬಹುದು. ಆದರೆ ನೀನು ಪಾಠಗಳಿಗೆ ಗಮನವಿರಿಸದಿದ್ದಲ್ಲಿ ಪಾಸಾಗಲಾರೆ"—ಎಂದರು! ಎಂಥ ಅಪಮಾನ! ಅವನು ಆ ಐದು ವರುಷಗಳಲ್ಲಿ ಒಂದೇ ಒಂದು ಅಂಥ ಮಾತನ್ನು ಕೇಳಿದವನಲ್ಲ. ಸಿಟ್ಟು ಬಂದಿತು. "ಪಾಸಾಗುವುದು ಬಿಡುವುದು ನನ್ನ ಕೆಲಸ"—ಎಂದು ಒರಟಾಗಿ ನುಡಿದನು. ಸರಿ, ಹೊಸಬರವರು—ಬಂದಿತು ಕೋಪ! "ಹೊರಕ್ಕೆ ನಡಿ"ಯೆಂದರು. ಯಾವತ್ತು ಹುಡುಗರ ದೃಷ್ಟಿ ಆ ಕಡೆಗೆ ಹರಿಯಿತು. ರಾಜನಿಗೆ ಮತ್ತಷ್ಟು ನೋವಾಯಿತು. ಎಲ್ಲರ ಎದುರಿ ಗಾದ ಅಪಮಾನವನ್ನು ಸಹಿಸಲಾರೆನೆಂದು ಕುಳಿತುಬಿಟ್ಟನು. ಉಪಾಧ್ಯಾಯ ರಿಗೆ ಮಿಕ್ಕಿದ ಬಿಗು ಅವನದ್ದಾಯಿತು. ಅವರಿಗೆ ಏನುಮಾಡಲೆಂದು ತೋರ ಲಿಲ್ಲ. ಇನ್ನುಳಿದ ಮಾರ್ಗವು ಶಾಲಾಧಿಕಾರಿಗಳಿಗೆ ತಿಳಿಸುವುದು. ಆದೂ

ಚೆಂದವೆನಿಸಲಿಲ್ಲ. "ನೀನು ಕ್ಲಾಸಿನಲ್ಲಿರುವ ತನಕ ನಾನು ಪಾಠವನ್ನು ಮಾಡೆ ನೆಂದು" – ನುಡಿದೆದ್ದರು. ಅವರು ಹೊರಕ್ಕೆ ಕಾಲಿಡಲು ಘಂಟೆಬಾರಿಸಿತು! 'ಹೋ'ಯೆಂದು ಹುಡುಗರು ಕಿರುಚಿದರು. ಹುಡುಗರಿಗೆ ಇಂಥ ಕಾಳಗ ವನ್ನು ಕಾಣುವುದೆಂದರೆ ಅತ್ಯಾನಂದ. ಅದೂ ಇಂದಿನ ಕಾಳಗದಲ್ಲಿ ತಕ್ಕಡಿ ಯಾರ ಕಡೆಗೆ ಒಲವೀಯುವುದೆಂದು ನೋಡುವ ಕುತೂಹಲ!

ಅಂತು ಆ ದಿನ ಯಾವ ನಿರ್ಧಾರವೂ ಇಲ್ಲ. ಸಂಜೆಯೊಳಗೆ ಹೊಸ ಮಾಸ್ತರರ ಆರ್ಭಟೆಯ ಸುದ್ದಿ ಇಡಿ ಶಾಲೆಗೆ ಹಬ್ಬಿತು. ಮುಖ್ಯ ಉಪಾ ಧ್ಯಾಯರ ಕಿವಿಗೂ ಮುಟ್ಟಿತು. ಆದರೂ ತಾನಾಗಿ ಈ ಪ್ರಸ್ತಾಪವನ್ನು ಎತ್ತ ಲಿಲ್ಲ. ಉಳಿದೊಬ್ಬಿಬ್ಬ ಉಪಾಧ್ಯಾಯರು ಐಯ್ಯರೊಡನೆ ಸವಿನುಡಿಯಾಡಿ "ಅವನು ಅಂಥ ಹುಡುಗನಲ್ಲ" ಎಂದರು "ನಾನು ಅಂಥವನೇ?" — ಎಂದು ಇವರು ಕೇಳಿದರು.

ಸರಿ ಮರುದಿನ ಬಂದಿತು! ಮೊದಲನೆ ಪಾಠವೇ ಐಯ್ಯರರ ಗಣಿತದ ಪಾಠ. ರಾಜನ ಕ್ಲಾಸಿನ ಬಳಿ ಹುಡುಗರು ಕಿಕ್ಕಿರಿದು ನಿಂತಿದ್ದರು. ಇದನ್ನು ತಿಳಿದ ಮುಖ್ಯ ಉಪಾಧ್ಯಾಯರು ಆ ದಾರಿಯಾಗಿ ಸುಳಿಯಲು, ಮೋಡವು ಚೆದರಿತು. ಐಯ್ಯರರು ಕೊಟಡಿಯನ್ನು ಪ್ರವೇಶಿಸಿದರು. ಗಂಭೀರವಾಗಿ ಕುಳಿತ ರಾಜನ ಮುಖ ಮೊದಲಿಗೆ ಕಾಣಿಸಿತು! "ನನ್ನ ಅಪ್ಪಣೆಯನ್ನು ಇನ್ನೂ ಮಾನ್ಯಮಾಡೆಯಾ?" — ಎಂದು ತಿರುಗೊಮ್ಮೆ ಕೇಳಿ ದರು. ರಾಜುವು ಮೌನವಾಗಿದ್ದನು. ಉಪಾಧ್ಯಾಯರು ಹೊರಕ್ಕೆ ಬಂದರು. ಬಾಲಕರು ಬೆಪ್ಪಾದರು. ಒಬ್ಬಿಬ್ಬರು ಹೊರಗೆ ಇಣಿಕಿ ನೋಡಿದರು. ಉಪಾಧ್ಯಾಯರು ಇರಲಿಲ್ಲ. ತಮಾಷೆ ನೋಡುವಾ ಎಂಬ ಲವಲವಿಕೆಯಿಂದ ಮುಖ್ಯ ಉಪಾಧ್ಯಾಯರಲ್ಲಿಗೆ ಹೋಗಿ, "ಸರ್, ನಮಗೆ ಉಪಾಧ್ಯಾಯ ರಿಲ್ಲ" — ಎಂದರು. ಅಷ್ಟಕ್ಕೆ ಐಯ್ಯರರ ಆಗಮನವಾಯಿತು! "ನಿಮಗಲ್ಲವೇ ಅಲ್ಲಿನ ಪಾಠ" — ಎಂದು ಕೇಳಿದರು. ಬಾಲಕರು ಜಿಗಿದೋಡಿದರು.

ಅವರಲ್ಲಿ ಏನು ಮಾತುಕಥೆಗಳಾದುವೋ. ತಿರುಗಿ ಐಯ್ಯರರು ಪಾಠಮಾಡಲು ಬಂದರು. ಆಗ ರಾಜುವು ಕುಳಿತೇ ಇದ್ದನು. ನಿತ್ಯದಂತೆ ಪಾಠವು ಸಾಗಿತು. ಬಾಲಕರು ಗಂಟಲೊಳಗೆ "ರಾಜುಕಿ ಜೈ" ಅಂದು

ಕೊಂಡರು. ಅಂತು ಎಷ್ಟೋ ದಿನಗಳ ವರೆಗೆ ಏನಾಯಿತೆಂದು ತಿಳಿದವರಿಲ್ಲ. ಹುಡುಗರಿಗಂತು ಸುದ್ದಿ ಹತ್ತಲಿಲ್ಲ. ರಾಜುವಿನ ಬಳಿಗೆ ಬಂದು—"ನೀನು, ಅವರಲ್ಲಿ ಕ್ಷಮೆ ಕೇಳಿದೆಯೆಂದು ಸುದ್ದಿ. ನಿಜವೇ?" ಅಂದರು. ರಾಜು "ಇಲ್ಲ"ವೆಂದನು. ಹುಡುಗರ ಪಾಲಿಗೆ ಉಪಾಧ್ಯಾಯರು ಸೋತುದೆಂದೇ ಖಂಡಿತವಾಯಿತು.

ಮುಂದೆ ಒಂದು ತಿಂಗಳಲ್ಲಿ ಐಯ್ಯರರು ನಾಲ್ಕು ಬಾರಿ ರಾಜುವಿಗೆ "ನೀನು ಬುದ್ಧಿವಂತನೆಂದು ತಿಳಿದುಕೊಂಡರೆ ಸರಿಯಲ್ಲವೆಂದು,"—ಎಚ್ಚರ ವಿತ್ತರು. ಇದು ಉಪಾಧ್ಯಾಯರ ಅಸೂಯೆಯೆಂದು ಎಲ್ಲರಿಗೂ ಕಂಡಿತು. ಮುಂದೆ ತ್ರೈಮಾಸಿಕ ಪರೀಕ್ಷೆ ಬಂದಿತು! ಗಣಿತದ ಪರೀಕ್ಷೆಯಾಯಿತು. ಐಯ್ಯರರು ಹುಡುಗನ ಪತ್ರವನ್ನು ತಾನು ತಿದ್ದದೆ ಮುಖ್ಯ ಉಪಾಧ್ಯಾಯರಿಗೆ ಒಪ್ಪಿಸಿದರು. ಫಲಿತವನ್ನು ಎಲ್ಲರೂ ನಿರೀಕ್ಷಿಸುತ್ತಿದ್ದರು. ನೂರಕ್ಕೆ ನೂರನ್ನು ಗಳಿಸಿದ್ದ ರಾಜುವಿಗೆ ಈ ಬಾರಿ ಬರೇ 40!, ಬಾಲಕರು ಐಯ್ಯರರ ಮೇಲೆ ಸಿಟ್ಟಾದರು. ಆದರೆ ಪತ್ರಪರೀಕ್ಷಕರು ಅವರಲ್ಲವೆಂದು ತಿಳಿಯಲು ತಿರುಗಿ ಸುಮ್ಮನಾದರು. ಉಳಿದ ವಿಷಯಗಳಲ್ಲೂ ಅವನಿಗೆ ಮೊದಲು ಸಿಗುತ್ತಿದ್ದಷ್ಟು ಗುಣಗಳು ದೊರೆಯಲಿಲ್ಲವಂತೆ! ರಾಜುವಿನ ಹಿತೇಚ್ಛುಗಳು ಇದರ ಕಾರಣವನ್ನು ಊಹಿಸತೊಡಗಿದರು. ಆ ದಿನ ಹುಡುಗನನ್ನು ಅಪ ಮಾನಿಸಿದುದರಿಂದ ಅವನ ಮನಸ್ಸು ವ್ಯಾಸಂಗಕ್ಕೆ ವಿಮುಖವಾಯಿತು ಎಂದರು. ಅಂತು ಪರೋಕ್ಷದಲ್ಲಿ ಐಯ್ಯರರ ಜಾತಕವು ತಿರುಗಿತು.

ನವರಾತ್ರಿಯ ರಜೆ ಬಂದಿತು. ಭೃಗುವು ಊರನ್ನು ಸೇರಿದನು. ಅವನು ತೇರ್ಗಡೆಯಾಗಿದ್ದನು. ಇತ್ತ ಅವನು ಕಣ್ಣಿಗೆ ಬೀಳಲು, ಸುಬ್ಬ ರಾಯರು "ಅಹುದೋ ಭೃಗು, ನಮ್ಮ ಹುಡುಗನೇಕೆ ಬರಲಿಲ್ಲ?" ಎಂದು ಕೇಳಿದರು. ಭೃಗುವಿಗೆ ಅದು ತಿಳಿದಿರಲಿಲ್ಲ. ರಾಯರು ಬರುವನೆಂದು ಊಹಿಸಿ ಅವನಿಗೆ ಪತ್ರಬರೆದಿರಲಿಲ್ಲ. ಈಗ ಬರೆದರು. ಆದರೂ ಅವನು ಬರಲಿಲ್ಲ. ಇನ್ನೊಂದು ರಜೆಗೆ ಬರುವೆನೆಂದು ಉತ್ತರವಿತ್ತನು. ಪ್ರಾಯಶಃ ಹುಡುಗನ ಕಿವಿಯ ಮೇಲೆ ಲಗ್ನದ ವಿಚಾರ ಬಿದ್ದಿರಬೇಕು ಎಂದು ಅಂಜಿ ದರು. ಆ ಬಾರಿ ಬಲವಂತಪಡಿಸಲು ಹೋಗಲಿಲ್ಲ.

ತಿರುಗಿ ಮೂರು ತಿಂಗಳು ಕಳೆಯಲು ವರುಷಾರ್ಧದ ಪರೀಕ್ಷೆಯಾಯಿತು. ಐಯ್ಯರರು ರಾಜುವಿನ ಉತ್ತರಮಾಲೆಯನ್ನು ಕಂಡು— "ರಾಯರ ಕುದುರೆ . . . " ಎಂದರು. ಉಳಿದವರೂ ಆಗ ಬಳಿಯಲ್ಲಿದ್ದರೂ ಪ್ರತಿಭಟಿಸುವ ಧೈರ್ಯವು ಅವರಿಗಾಗಲಿಲ್ಲ.

ಕ್ರಿಸ್‌ಮಸ್ ರಜೆಗೆ ರಾಜುವು ಊರಿಗೆ ಬಂದನು. ಬಂದ ದಿನ ರಾತ್ರಿಯೇ ಸುಬ್ಬರಾಯರು ಪುರಾಣ ತೆಗೆದರು "ನೀನಿರುವುದು ಒಬ್ಬನೇ ಮಗ. ನನಗೆ ವಯಸ್ಸಾಯಿತು, (ಬರೇ ೪೦) ತಾಯಿ ಮುದುಕಿ. ನಿನಗೆ ವಿವಾಹವಾದುದನ್ನು ಕಂಡು ಸಾಯಬಾರದೇ ಎಂದು" ನಾಟಕವಾಡಿದರು. ರಾಜುವು ಪಿತೃವಚನಕ್ಕೆ ಎದುರಾಡಲಿಲ್ಲ. ಆದರೆ ಹುಡುಗಿಯನ್ನು ತಾನು ಕಾಣದೆ ವರಿಸಲಾರೆ ಎಂದನು. "ಅಯ್ಯೋ! ತಹಶಿಲ್ದಾರರ ಹುಡುಗಿ! ಚಿನ್ನದ ಹಾಗೆ ಇರುವಳಂತೆ! ಸದ್ಯ ಅವರ ತಮ್ಮನ ಮನೆಯಲ್ಲಿ ಇರುವಳಂತೆ ರಜೆಗೆ ಕರೆಯಿಸುವೆನೆಂದಿರುವರು" .. ಎಂದರು.

ತಹಶಿಲ್ದಾರರು ಒಂದು ದಿನ ಭಾವೀ ಜಾಮಾತನನ್ನು ಕರೆಯಿಸಿಕೊಂಡರು. ರಾಯರೂ ಮಗುವಿನೊಂದಿಗೆ ಬಂದರು. ತಿಂಡಿತಿನಸುಗಳಾದುವು. ಹುಡುಗಿಯನ್ನು ಹೊರಲಾರದಷ್ಟು ಆಭರಣಗಳಿಂದ ಅಲಂಕರಿಸಿದ್ದರು. ಅವಿಲ್ಲದೆ ರಾಯರ ಪಾಲಿಗೆ ಹುಡುಗಿ ಚೆನ್ನಾಗಿ ಕಾಣಿಸಳೆಂದು ಅವರಿಗೆ ತಿಳಿದಿತ್ತು. ಒಂದು ಬಾರಿ ಹುಡುಗಿ, ರಾಜುವಿನೆದುರಿಗೆ, ತಲೆ ಬಗ್ಗಿಸಿ ನಡೆದು ಹೋದಳು. ಅರೆ ಸಂಕೋಚದಿಂದ ರಾಜುವು ಕಣ್ಣೆತ್ತಿ ನೋಡಿದನು. ಕಡುಪಚ್ಚೆ ಬಣ್ಣದ ಧರ್ಮಾವರ ಸೀರೆ! ಮಣಕಟ್ಟಲೆ ಆಭರಣಗಳು ಕಣ್ಣು ಕುಕ್ಕಿದುವು! ಮೋರೆಯನ್ನು ಕ್ಷಣಕಾಲ ಕಂಡನೋ ಇಲ್ಲವೋ. ತಿರುಗಿ ಕಾಣುವ ಮನವಾಗಲಿಲ್ಲ. ರಾಯರು ತೃಪ್ತರಾಗಿ ಮನೆಗೆ ಬಂದರು. ತಹಶಿಲ್ದಾರರು ಆಗಬಹುದಾದ ಅಳಿಯನನ್ನು ಅವನ ಮನೆಯ ತನಕ ಬೀಳ್ಕೊಟ್ಟರು!

ರಾತ್ರಿ ರಾಯರು ಮಗನ ಅಭಿಮತ ಕೇಳಿದರು. ರಾಜುವಿಗೆ ಕೋಪ ಬಂದಿತು. ಎದ್ದು ಹೊರಟನು! ರಾಯರು ಹತಾಶರಾದರು. ತಹಶಿಲ್ದಾರ

ರಲ್ಲಿ ಅಷ್ಟು ಸಂಪತ್ತು ಇದ್ದಿತೆಂದು ಅವರು ತಿಳಿದಿರಲಿಲ್ಲ. ಅದನ್ನು ಕಂಡು ನೆಂಟಸ್ಥಿಕೆ ತಿರಸ್ಕರಿಸಲು ಮನಬಾರದಾಯಿತು. ಆದರೆ ಹುಡುಗನಿಗೆ ತೃಪ್ತಿಯಾಗಲಿಲ್ಲೆಂಬುದು ನಿಶ್ಚಯ! ಗೃಹಿಣಿಯೊಡನೆ ಯೋಚಿಸಿದರು. ಕೊನೆಗೆ ಮಗನನ್ನು ಒಪ್ಪಿಸುವ ಭಾರ ನಿನ್ನದೆಂದು ಅವಳ ಮೇಲೆಯೇ ಭಾರವನ್ನಿಳಿಸಿದರು. ಅವಳು ಹಳ್ಳಿಯಲ್ಲಿ ನೆರೆದವಳಾದವರೂ ಪೇಟೆಯಲ್ಲಿ ತಿರುಗಿದ ಮಗುವಿನ ಮನಸ್ಸನ್ನು ತಿಳಿಯುವ ಶಕ್ತಿಯಿತ್ತು. ಚೆಲುವಿನ ನುಡಿಯನ್ನಾಡಿ, ಮಗನ ಅತೃಪ್ತಿಯ ಕಾರಣ ಗೊತ್ತುಹಿಡಿದಳು. "ಅಮ್ಮಾ, ಹುಲಿಬಣ್ಣದ ಪಟ್ಟೆಸೀರೆ, ಹೊರೆಗಟ್ಟಲೆ ಚಿನ್ನವಿದ್ದರಾಯಿತೇ?" ಎಂಬ ಅವನ ಒಂದು ಮಾತಿನಲ್ಲಿ ತಾಯಿಗೆ ಗುಟ್ಟಿನ ಸೆರಗು ಸಿಕ್ಕಿತು. "ಮಗು, ಅದಾಗದಿದ್ದರೆ ಹೋಗಲಿ; ಬೇರೆ ಒಳ್ಳೆಯ ಹುಡುಗಿಯರಿಲ್ಲವೇ ಊರಿನಲ್ಲಿ?"— ಎಂದಳು.

ಒಂದೆರಡು ದಿನಗಳಲ್ಲಿ ರಾಯರ ಮನೆಯ ಒಳಚಾವಡಿಯ ಬಳಿ ಯಜಮಾನಿಯೂ, ಇನ್ನೊಬ್ಬ ಹದಿನಾರು ವಯಸ್ಸಿನ ಬಾಲೆಯೂ ಹೂಸರ ಹೆಣೆಯುತ್ತ ಕುಳಿತಿದ್ದರು. ಅಷ್ಟರಲ್ಲಿ ರಾಜು ಬಂದನು. ಬೇರೆಯವರಿದ್ದುದನ್ನು ಕಂಡು ಕಾಲ್ತೆಗೆಯಲೆನ್ನುವಷ್ಟರಲ್ಲಿ ತಾಯಿಯು "ಬಾ, ಮಗು"— ಎಂದಳು. ರಾಜು ಬಂದು ಕುಳಿತನು. ಏನೆಲ್ಲಾ ಮಾಯಮಾಟಗಳಾದುವೋ ತಿಳಿಯದು. ರಾಜು ಲಗ್ನಕ್ಕೆ ಒಪ್ಪಿಗೆಯಿತ್ತನು! ಆಗ ಕಂಡ ಹುಡುಗಿಯೇ ವಧು. ಲಗ್ನಮಾತ್ರ ದೊಡ್ಡ ರಜೆಯಲ್ಲಿ ಎಂದು ನಿಶ್ಚಯವಾಗಿತ್ತು. ಈಗ ಅನುಕೂಲ ಮುಹೂರ್ತಗಳಿಲ್ಲವಂತೆ! ಹುಡುಗಿ ಯಾರೆಂದು ಬಲ್ಲಿರಾ? ತಹಶಿಲ್ದಾರರ ಅದೇ ಮಗಳು; "ಸುಖಲತೆ"ಯಂತೆ. ರಾಜುವಿನ ತಾಯಿ ಈ ಪೇಟೆಯ ಹೆಸರನ್ನು ಕಂಡು ನಗುತ್ತಿದ್ದಳು. ಸೊಸೆ ಮನೆಗೆ ಬಂದರೆ "ಕನಕಾಕ್ಷಿ" ಎಂದು ಹೆಸರಿಡುವೆನೆಂದು ನಿಶ್ಚಯಿಸಿಕೊಂಡಿದ್ದಳು.

ಜನವರಿ ತಿಂಗಳು ಬರಲು ಹಾಳಾದ ಶಾಲೆ ಬಂದಿತು. ಐಯ್ಯರರಿಗೆ ವರ್ಗವಾಗಿರಲಿಲ್ಲ. ಅದೇ ತರಗತಿಯಲ್ಲಿ ಇನ್ನೂ ಗಣಿತವನ್ನು ಹೇಳಿಕೊಡುತ್ತಿದ್ದರಂತೆ! ಅವರಿಗೆ ಹೇಳಿಕೊಡಲು ತಾನು ಸಾಕು ಎಂದು ರಾಜುವನ್ನು

ತ್ತಿದ್ದ. ಉಳಿದ ಗೆಳೆಯರೂ ಅನ್ನುತ್ತಿದ್ದರು! ಒಂದು ದಿನ ಒಂದು ಪ್ರಮಾದ ವಾಯಿತು!

ಐಯ್ಯರರು ಎಲ್ಲರ ಗಣಿತ ಪುಸ್ತಕಗಳನ್ನು ಮನೆಗೆ ತಿದ್ದಲು ಒಯ್ದರು. ಅದನ್ನು ತಿದ್ದುವಾಗ ರಾಜುವಿನ ಪುಸ್ತಕವನ್ನೂ ತೆರೆದರು ಅದರಲ್ಲಿ ಒಂದು ವಿಚಿತ್ರ ಪತ್ರವಿತ್ತಂತೆ! "ಸಿಕ್ಕಿದನು ಕಳ್ಳ" ಎಂದು ಅವರು ಹಿಗ್ಗಿದರು. ಅದು ರಾಜುವಿನ ಕೈಬರಹದಲ್ಲಿತ್ತು. ಬರೆದುದು ಅವನ ಸಹಪಾಠಿಯಾಗಿದ್ದೊಬ್ಬ ಬಾಲಕಿಗೆ! ಹುಡುಗನು ಪ್ರಣಯಕ್ಕೆ ಸಿಲುಕಿ, ಪಾಠದಲ್ಲಿ ಉದಾಸೀನನಾಗಿರುವನೆಂಬುದು ಖಂಡಿತವಾಯಿತು. ಇದೇ ಸಂಶಯವು ಅವರಿಗೆ, ಶಾಲೆಗೆ ಕಾಲಿಟ್ಟ ದಿನವೇ ಬಂದಿತ್ತು. ಆದರೆ, ಬಲವಾಗಿ ಬಾಯಿ ತೆರೆಯಲು ಆಧಾರಗಳು ಸಿಗಲಿಲ್ಲ ಆರೋಪವನ್ನು ಹೊರಿಸಲಾರದೆ ಸುಮ್ಮನಿದ್ದರು. ಮರುದಿನವೇ ಆ ಬಾಲಕಿಯನ್ನು ಬಳಿಗೆ ಕರೆಯಿಸಿ ಕೊಂಡು ಕಾಗದವನ್ನು ಅವಳ ಮುಂದಿರಿಸಿದರು. ಅವಳಿಗೆ ತಡೆಯಲಾರದ ನಾಚುಗೆಯಾಯಿತು! ದುಃಖವಾಯಿತು ಅತ್ತಳು. ತಾನಿನ್ನು ಅಂಥ ಅಪ ರಾಧದಲ್ಲಿ ಸೇರೆನೆಂದು ನುಡಿದಳು. ತನ್ನ ಯಾವತ್ತು ಊಹೆಗಳು ನಿಜ ವೆಂದು ಐಯ್ಯರರಿಗೆ ದೃಢವಾಯಿತು. ಆದರೆ ಹುಡುಗಿಯ ಸಲುವಾಗಿ ವಿಷಯ ವನ್ನು ಬಹಿರಂಗಪಡಿಸೆನೆಂದು, ರಾಜುವನ್ನು ಬಳಿಗೆ ಕರೆಯಿಸುವ ಯೋಚನೆ ಮಾಡಿದರು. ಆದರೆ, ಅವನು ಬರುವನೋ ಇಲ್ಲವೋ ಎಂಬ ಸಂಶಯವಾ ಯಿತು. ಬೇರೆ ಉಪಾಯ ಕಾಣಿಸಲಿಲ್ಲ; ಕರೆಯಿಸಿದರು. "ನಿನ್ನನ್ನು, ಶಾಲೆಯಿಂದ ಓಡಿಸುವ ಸಾಮರ್ಥ್ಯ ನನಗಿದೆಯೆಂದು" ಹೇಳಿದರು. ರಾಜ ನಿಗೆ ನಗುಬಂದಿತು. ಆದರೆ ಉಪಾಧ್ಯಾಯರು ಅವನ ಪತ್ರವನ್ನು ಮುಂದಿ ಡಲು ಮುಖ ಸಪ್ಪಗಾಯಿತು. ಬರಹ ಮೂಲಕ ಕ್ಷಮೆಯನ್ನು ಕೊಡದೆ ಸುಮ್ಮನಿರಲಾರೆನೆಂದು ಹೇಳಿದರು. ಬರಿಮಾತಿನ ವಿಶ್ವಾಸ ಅವರಿಗಿಲ್ಲ. ಕಾರಣ, ಮೊದಲನೆ ಬಾರಿಗೆ, ಅವರೊಡನೆ ಅವಿಧೇಯನಾಗಿ ನಡೆದುದಕ್ಕೆ ರಾಜುವು ಬರಿಮಾತಿನ ಕ್ಷಮೆಯನ್ನು ನಿಜವಾಗಿಯೂ ಕೇಳಿದ್ದನು. ಇತ್ತ ಗೆಳೆಯವರೊಡನೆ ಹಾಗೆ ಮಾಡಿಲ್ಲವೆಂದೂ ನುಡಿದಿದ್ದನು. ಈ ಬಾರಿ ಸಿಕ್ಕಿ ಬಿದ್ದನು. ಉಪಾಧ್ಯಾಯರು ಮಸಿ ಮತ್ತು ಒಂದು ತುಂಡು ಕಾಗದವನ್ನು

ಕೊಟ್ಟರು  ರಾಜುವಿನ ಅಹಂಕಾರವು ಕುದಿಯಿತು. ಸಿಟ್ಟಿನಿಂದ ಮಗ್ಗು ಲಿನ ಮೇಜಿನ ಬಳಿ ಬಂದು ಕುಳಿತು, ಪತ್ರವೊಂದನ್ನು ಬರೆದು ಅವರ ಕೈ ಮೇಲಿರಿಸಿ ಉದ್ಧಟನಂತೆ ಹೊರಟುಹೋದನು.

ಐಯ್ಯರರು ಪತ್ರ ತೆರೆದರು! ಆಶ್ಚರಿಯಿಂದ ದಿಗ್ಭ್ರಾಂತರಾದರು. “ನನ್ನ ಮತ್ತು ಆ ಬಾಲಿಕೆಯ ವಿವಾಹವು ರಜೆಯಲ್ಲಿ 29-4-'30ರ ದಿನವೇ ಆಗತಕ್ಕುದಿದೆ. ತಾವು ಒಂದು ವಧೂವರರನ್ನು ಆಶೀರ್ವದಿಸಿ ಹೋಗಬೇಕೆ”ಂಬ ವಿನಂತಿಯದು! ಏನು ಮಾಡಲೆಂದು ತೋಚಲಿಲ್ಲ. ಒಳಗೊಳಗೇ ಬೆಂದರು; ಬೆವರಿದರು! ಮರುದಿನ ನಿಜಕ್ಕೂ ಮುದ್ರಿತವಾದ ಆಹ್ವಾನಪತ್ರಿಕೆ ಬಂದಿತು. ರಾಜುವಿನ ತಂದೆ ಸುಬ್ಬರಾಯರೂ, ಆ ಬಾಲಿ ಕೆಯ ತಂದೆ(ತಹಶಿಲ್ದಾರರು)ಯೂ ಸೇರಿ ಅವರನ್ನು ಆಹ್ವಾನಿಸಿದ್ದರು! ಮೆಟ್ರಿಕ್ಕು ಪರೀಕ್ಷೆ ಮುಗಿದ ಮರುದಿನವೇ ವಿವಾಹ! ಅಲ್ಲಿಗೆ ಅವರ ಅಪ ಮಾನದ ಬಂದಿಗೆ ತುಂಬಿತು. “ಅಹಂಕಾರಕ್ಕೆ ತಕ್ಕ ಪ್ರಾಯಶ್ಚಿತ್ತವಿದೆ”— ಎಂದು ತಮ್ಮಷ್ಟಕ್ಕೆ ನುಡಿದುಕೊಂಡರು.

ಒಂದೆರಡು ದಿನಗಳಲ್ಲಿ ಪರೀಕ್ಷೆಗೆ ಕಳುಹಿಸುವ ದಿನ ಬಂದಿತು. ರಾಜನು ಲೆಕ್ಕದಲ್ಲಿ ತೀರ ಅಯೋಗ್ಯನೆಂದು ಐಯ್ಯರರು ಹಟಹಿಡಿದರು. ಉಳಿದವರು ಅವನ ಪರವಾಗಿ ವಾದಿಸಿದರು. “ಶ್ರೀಮಂತ ಸುಬ್ಬರಾಯರ ಮಗನು; ಇದುವರೆಗೆ ಪರೀಕ್ಷೆಯಲ್ಲಿ ಪ್ರಥಮ ಬಂದವನು, ಈ ವರುಷ ಒಂದು ಪಾಠದಲ್ಲಿ ಹಿಂದುಳಿದನೆಂದು ನಿಲ್ಲಿಸುವುದೇ?” ಎಂದು ಛಲವಾಯಿತು. ಅಂತು ಅದೃಷ್ಟಬಲವಿರಲು ರಾಜುವಿಗೇ ಗೆಲವಾಯಿತು. ಐಯ್ಯರರು ನೊಂದುಕೊಂಡರು.

ಪರೀಕ್ಷೆ ಕಳೆಯಿತು. ರಾಜುವಿನ ವಿವಾಹವಾಯಿತು. ಸುಖಲತೆ ಯೂ ಅವನೂ ರಜಾಕಾಲವನ್ನು ತಹಶಿಲ್ದಾರರ ಮನೆಯಲ್ಲೇ ಕಳೆದರು. ರಾಯರ ಹಿಗ್ಗಿಗೆ ಎಣೆಯಿಲ್ಲ. ಇನ್ನು ಮುಂದಿನ ವರುಷದ ಯೋಚನೆಮಾಡಲು ಮಗನನ್ನು ಕರೆಯಿಸಿಕೊಂಡರು. ಸೊಸೆಯೂ ಬಂದಳು. ರಾಯರು “ಬಿ. ಎ. ಬಿ. ಯಲ್.”— ಪರ್ವತವನ್ನೆತ್ತಿ ಹಿಡಿದರು. ಆದರೆ ರಾಜುವಿಗೆ ಮೊದಲಿನ ಉತ್ಸಾಹವಿದ್ದಿರಲಿಲ್ಲ. ಅವನೀಗ ಇದ್ದುದರಲ್ಲಿಯೇ ತೃಪ್ತ

ನಾದನು. ಆದರೆ ಮಂತ್ರಾಲೋಚನೆಗೆ ಪತ್ನಿಯ ಬಳಿ ಕುಳಿತು ವಿಚಾರಿಸ ತೊಡಗಿದನು. ಅವಳು ಕಲಿಯಲೇಬೇಕೆಂದು ಹೇಳಿದಳು. ಅದೇ ನಿಶ್ಚಯ ವಾಯಿತು. ಇಷ್ಟಾಗುತ್ತಿದ್ದ ಗಳಿಗೆಯಲ್ಲಿ ಅಂಚೆಯವನು ಬಂದು ಪತ್ರ ವೊಂದನ್ನು ಅವನ ಕೈಮೇಲಿರಿಸಿ ಹೋದನು. ರಾಜುವು ತೆರೆದು ನೋಡಿ ದನು. ಐಯ್ಯರರ ಬರಹ! ಸಿಟ್ಟು ಬಂದಿತು. ಹರಿದು ಬಿಡುವುದರಲ್ಲಿ ದ್ದನು! ಆದರೆ ನೋಡುತ್ತಾನೆ ಪರೀಕ್ಷಾಫಲದ ಪಟ್ಟಿಯದು. ಮೊದಲಿಗೆ ಕಾಣಿಸಿದ ಹೆಸರು—ಭೃಗುವಿನದು! ಆ ವರುಷ ಆ ಶಾಲೆಯ ಮಟ್ಟಿಗೆ ಅವನೇ ಪ್ರಥಮನೆನಿಸಿಕೊಂಡನು. ಅಸೂಯೆಯಿಂದ ರಾಜುವಿಗೊಂದು ನಗುಬಂದಿತು. ತೇರ್ಗಡೆಯಾದವರಲ್ಲಿ ಸುಖಲತೆಯ ಹೆಸರೂ ಇದ್ದಿತ್ತು. ಆದರೆ ರಾಜುವನ್ನು ಕಾಣೆ. ರಾಜುವು ಇದು ಆ ಕುತಂತ್ರಿ ಉಪಾಧ್ಯಾ ಯರ ಕೆಲಸವೆಂದು ತಿಳಿದು ನಕ್ಕುಬಿಟ್ಟನು!

ಅಷ್ಟರಲ್ಲಿ ಅಂಚೆಯವನು ಮರಳಿ ಬಂದು—"ಸ್ವಾಮಿ, ಅದು ನಿಮ್ಮದಲ್ಲ. ನಿಮ್ಮ ಪತ್ರ ಇದು"—ಎಂದು ಇನ್ನೊಂದು ಕಾಗದವನ್ನು ಕೈಮೇಲಿರಿಸಿದನು. ಭೃಗುವಿಗೆ ಬರೆದ ಪತ್ರ ಅಷ್ಟರಲ್ಲಿ ಮುದ್ದೆಯಾಗಿತ್ತು. ರಾಜುವು ಒಮ್ಮೆ ಲತೆಯ ಮುಖನೋಡುವನು. ಇನ್ನೊಮ್ಮೆ ಅಂಚೆಯವನ ಮುಖನೋಡು ವನು. ತನ್ನ ಪತ್ರವನ್ನು ಒಡೆದು ಸಹ ನೋಡಲಿಲ್ಲ. ಕೊನೆಗೆ ಹೊಳೆ ಯಿತು— ಅದೃಷ್ಟ ಚಕ್ರವು ತಿರುಗಿತೆಂದು.

———— ——

## ೩. ಗೆಳೆಯರವರು.

ನಮ್ಮೂರ ಹ್ಯಾಸ್ಕೂಲೊಂದರ ಬಾಲಕರವರು. ಹತ್ತೆಂಟು ಮಂದಿ ತಂಡವಾಗಿ ದಿನವನ್ನು ತೀರ ಆನಂದದಲ್ಲಿ ಕಳೆಯಲೆಂದು ಉಗಿಬಂಡಿಯನ್ನೇರಿ ಹೊರಟರು. ಮಳೆಗಾಲವು ಕಳೆದಿದೆಯಷ್ಟೆ. ಮಳೆಯ ನೀರನ್ನು ಎರಡು ಗುಡ್ಡಗಳ ನಡುವೆ, ದಂಡೆಹಾಕಿ ತಡೆದು ಹಿಡಿದು ಒಮ್ಮೆಗೆ ಕಡಿದರೆ ಎಷ್ಟು ಆರ್ಭಟೆ, ಆವೇಶಗಳಿಂದ ಅದು ಉಬ್ಬಿ ಉಕ್ಕಬಹುದೋ, ಅದೇ ತೆರನಲ್ಲಾಗಿದೆ ಈ ಬಾಲಕರ ಉತ್ಸಾಹ. ಈ ವರುಷದ ಅಧಿಕ ವೃಷ್ಟಿಯಿಂದ ಎಲ್ಲಿಗಾದರೂ ಹೋಗಿ ಒಂದು ದಿನವನ್ನು ಅಲೆದಾಡಿ ಕಳೆಯಲು ಅವಕಾಶವಾಗಿರಲಿಲ್ಲ. ಒತ್ತಟ್ಟು ಶಾಲೆ, ಇನ್ನೊತ್ತಟ್ಟು ವಿದ್ಯಾರ್ಥಿಭವನವೋ ಮನೆಯೋ. ಅವೆರಡರ ನಡುವೆ ತುಂಬಿಸಿಡಬೇಕು ಅವರ ಉತ್ಸಾಹದ ಝರಿಯನ್ನು. ನಾಲ್ಕು ತಿಂಗಳ ಕಾಲ ಇದೇ ಪಾಡು. ಈಗ ಒಂದೇ ಒಂದು ದಿನದ ಅವಕಾಶ ದೊರಕಿದೆ. ಆಕಾಶದಲ್ಲಿ ಮೋಡವಿಲ್ಲ. ಬಯಲೆಲ್ಲಾ ಹಸುರಾಗಿ ಕಾಣಿಸುತ್ತಿದೆ. ಮಳೆ ಬಂದೀತೆಂಬ ಭೀತಿ ಸಹ ಇಲ್ಲ. ಗೆಳೆಯರು ನಿರ್ಭಯರಾಗಿ, ತಿಂಡಿತಿನಸುಗಳನ್ನು ಕಟ್ಟಿಕೊಂಡು ಹೊರಟರು. ಅವರ ಯಾತ್ರೆಯ ಸ್ಥಳವು ಮಂಗಳೂರಿಗೆ ತೀರ ಸಮೀಪದ ಉಳ್ಳಾಲ. ಎಂಟು ಮೈಲಿ ದೂರ. ಆದರೆ ಆ ಪಯಣವನ್ನು ಮುಗಿಸಿ ಊರಿಗೆ ಹಿಂದಿರುಗುವುದು ಮರುದಿನದ ಬೆಳಗಿನ ಬಂಡಿಯಲ್ಲಿ. ಆ ಒಂದು ದಿನದ ವಿರಾಮವನ್ನು ಸಂಪೂರ್ಣವಾಗಿ ಬಯಲಿನಲ್ಲಿಯೇ ಆಟವಾಡಿ ಕಳೆಯಬೇಕೆಂದು ಸಂಕಲ್ಪಿಸಿದ್ದರು.

ಈಗ ಅವರು ಕುಳಿತ ಬಂಡಿಯಲ್ಲಿ, ಇತರ ಪ್ರಯಾಣಿಕರ ಸ್ವರವು ಕೇಳಿಸುತ್ತಿರಲಿಲ್ಲ! ಹೆಚ್ಚೇನು? ಒಮ್ಮೊಮ್ಮೆ ಉಗಿಯಂತ್ರದ ಕರ್ಕಶ ಧನಿಯೂ ಸಹ ಅಡಗುತ್ತಿತ್ತು. ವೈದ್ಯಾಲಯದಿಂದ ತಪ್ಪಿಸಿಕೊಂಡು ಬಂದ ಹುಚ್ಚರಷ್ಟು ಸ್ವತಂತ್ರರವರು. ಒಂದೇಸವನೆ ಮಾತನಾಡುತ್ತಿರುವರು ನಗುತ್ತಿರುವರು. ಕೈಚಪ್ಪಾಳೆ ಹೊಡೆಯುತ್ತಿರುವರು. ಅವರ ಆ ಸಭೆಯಲ್ಲಿ ಒಂದು ನೂರು ಸೂಚನೆಗಳು ಬಂದುವು. ಒಂದು ನೂರು ಅನುಮೋದನೆ

ಗಳು ಬಂದುವು. ಎಲ್ಲವೂ ಸ್ವೀಕೃತವಾದುವೇ ವಿನಹ ನಿರಾಕೃತವಾಗಲಿಲ್ಲ. ಆದರೆ ತಮ್ಮ ಮುಂದಿರುವ ೬ಳ ತಾಸುಗಳ ಅವಧಿಯಲ್ಲಿ ಅಷ್ಟೊಂದು ಸೂಚನೆಗಳನ್ನು ಜೀರ್ಣಿಸಿಕೊಳ್ಳಲು ಸಾಧ್ಯವೇ ಎಂಬ ಗೊಡವೆಗೆ ಯಾರೂ ಹೋಗಲಿಲ್ಲ. ಅಷ್ಟರಲ್ಲಿ ಹಾಳಾದ ಉಳ್ಳಾಲದ ರೈಲ್ವೆ ನಿಲ್ದಾಣ ಬಂದಿತು. ಒಮ್ಮೆ ಗಾಬರಿಯಾದಂತಾಯಿತು. ಹೊರಗಿಣಿಕಿ ನೋಡಿದರು. ವಿಶಾಲ ವಾದ ಸಮುದ್ರ! "ಹೋ!" ಎಂದು ಕೇಕೆ ಹೊಡೆದರು. ತಂಡವು ಇಳಿ ಯಿತು. ಇವರು ಇಳಿಯುವ ಗಲಭೆಯಲ್ಲಿ ಒಬ್ಬ ಮುದಿ ಪ್ರಯಾಣಿಕನು ನುಗ್ಗುನುರಿಯಾದನು. ಅವನು ಇಷ್ಟರ ತನಕ ಇವರ ಈ ಆಟವನ್ನು ಕಾಣುತ್ತ ಕುಳಿತಿದ್ದನು. ಒಂದೂ ಮಾತನಾಡಿರಲಿಲ್ಲ. ಅದರಲ್ಲೆ ತಲ್ಲೀನ ನಾಗಿದ್ದನು. ಈಗ ಅವನಿಗೂ ಎಚ್ಚರವಾಯಿತು. ತನ್ನ ಬಾಲ್ಯದ ಸ್ಮರಣೆ ಬಂದಿತು. ಇಂದಿನ ಅವಸ್ಥೆಯನ್ನು ನೆನೆದುಕೊಂಡು ತನ್ನಷ್ಟಕ್ಕೆ ಅಂದು ಕೊಂಡನು—"ಅಯ್ಯೋ ಹಸುಳೆಗಳೇ ‥ ಇವಕ್ಕೆ ಪ್ರಪಂಚವೇ ಏನೆಂದು ತಿಳಿ ಯದು. ದೊಡ್ಡವರಾದರೆ ಇವರ ಪ್ರಪಂಚದಲ್ಲಿ ಸುಖ ನಗುಗಳ ಲೇಶವೂ ಬರುತ್ತದೋ ಇಲ್ಲವೋ. ಈಗಿಷ್ಟು ನಗುವುವು; ಇನ್ನೊಂದು ಗಳಿಗೆಯಲ್ಲಿ ಅಳಬೇಕೋ ಏನೋ. ಸುಖದ ಹಿಂದಿಡೆ ದುಃಖ. ನಗುವಿದ್ದಷ್ಟು ಅಳು!" ಘಂಟೆ ಬಾರಿಸಿತು. ತಾನೂ ಅಲ್ಲೇ ಇಳಿಯತಕ್ಕವನೆಂದು ಹೊಳೆದು ಅವ ಸರದಿಂದ ಮುದುಕನು ಇಳಿಯುತೊಡಗಿದನು. ಅಷ್ಟರಲ್ಲಿ ಬಂಡಿ ಚಲಿಸಿತು. ಮುದುಕನು ಗಾಬರಿಯಿಂದ ಕೂಗಿದನು. ಹುಡುಗರ ತಂಡದಲ್ಲಿ ಹರಿ ಎಂಬ ಬಾಲಕನಿಗೆ ಅದು ಕೇಳಿಸಿತು. ಅವನು ಅಲ್ಲಿಗೋಡಿ, ಮುದುಕನನ್ನು ಎಳೆದು ಕೆಳಕ್ಕೆ ತಂದನು. "ದೇವರು, ನಿನಗೊಳ್ಳೆಯದನ್ನು ಮಾಡಲಪ್ಪಾ" ಎಂದು ಅವನು ಹರಸುವುದರೊಳಗೆ ಬಾಲಕರೆಲ್ಲಾ ಸ್ಟೇಶನಿನ ಹೊರಗೆ. ಸ್ಟೇಶನ ಮಾಸ್ತರನು ಓಡಿ ಬಂದು 'ಟಿಕೇಟನ್ನು ಕೊಟ್ಟುಹೋಗಿರಪ್ಪಾ'— ಎಂದು ಕೂಗಿಕೊಂಡರೂ ಕೇಳುವ ಹಾಗಿಲ್ಲ.

ನಗರ ಪಂಜರದಿಂದ ಹೊರಕ್ಕೆ ಬಂದ ಅವರಿಗೆ ದಿಕ್ಕೇ ಮರೆತುಹೋಗಿದೆ. 'ಹೋ'ಯೆಂದು ಓಡತೊಡಗಿದರು. ಯಾರ ಕಾಲಿಗೆ ಮುಳ್ಳು ನಾಟಿತೋ, ಯಾರ ಕಾಲು ಕಲ್ಲನ್ನು ಎಡವಿತೋ, ಕಂಡವರೂ ಇಲ್ಲ, ಎಣಿಸಿದವರೂ

ಇಲ್ಲ! ಹೋ!ಕಾರವೇ ಸರ್ವವನ್ನೂ ನುಂಗುವ ಅವರ ಜಯಘೋಷ ವಾಗಿತ್ತು. ಎಲ್ಲರೂ ಧಾವಿಸಿ ಬಂದು, ಗಾಳಿಮರದ ತೋಟವೊಂದರ ಬಳಿ ಮುಗ್ಗುರಿಸಿಬಿದ್ದರು. ಬಂದ ಆವೇಗ ಅಂಥದು. ತುಸು ಹೊತ್ತು ಉಸಿರಾಡಿಕೊಳ್ಳುವುದಕ್ಕಾಯಿತು. ಎದೆಬಡಿತವು ತಗ್ಗುವುದರೊಳಗೆ "ಈಗ?" "ಈಗ?" ಎಂದು ಕೇಳತೊಡಗಿದರು. ಪ್ರತಿಯೊಬ್ಬರೂ ಪ್ರಶ್ನಿಸಿದರು. ಉತ್ತರವೀಯುವ ತಾಳ್ಮೆ ಯಾರಿಗೂ ಇಲ್ಲ. ಏನು ನಿಶ್ಚಯವಾಯಿತೋ ತಿಳಿಯದು. ಎಲ್ಲರೂ ತಮ್ಮ ತಮ್ಮ ಗಂಟುಮೂಟೆಗಳನ್ನು ಅಲ್ಲಿಯೇ ಚೆಲ್ಲಿಕೊಟ್ಟು ಕಡಲಿನ ದಿಕ್ಕಿಗೆ ಧಾವಿಸಿದರು. ಕಡಲಿರುವುದು ಬರೆ ಹತ್ತು ಗಜ ದೂರದಲ್ಲಿ. ಆದರೂ ಓಟದ ವೇಗವು ತಾಸಿಗೆ ಪತ್ತು ಮೈಲು ಮಿಕ್ಕಿತ್ತು. ಒಬ್ಬಿಬ್ಬರು ಅರ್ಧಹಾದಿ ಹೋಗಿ ಮರಳಿಬಂದರು. ಸ್ನಾನಕ್ಕೆ ಹೋಗುವಾಗ ತಮ್ಮ ಅಂಗಿ ಟೋಪಿಗಳನ್ನು ತೆಗೆದು ಚಿಕ್ಕಪುಟ್ಟ ಉಡುಗೆ ಉಡಬೇಕೆಂದು ಆಗ ಎಣಿಕೆಗೆ ಬಂದಿತು. ಅದಕ್ಕಾಗಿ ಹಿಂದೆ ಬಂದರು. ದಾರಿಯುದ್ದಕ್ಕೂ ಉಡುಗೆಯನ್ನು ಚೆಲ್ಲಿಕೊಟ್ಟರು, ದಾರಿಯುದ್ದಕ್ಕೂ ಸ್ನಾನದುಡುಗೆಯನ್ನು ಧರಿಸುತ್ತ ಹೊರಟರು. ವಿರಾಮವಿಲ್ಲ! ಹರಿಯು ನೀರನ್ನು ತುಳಿದು ತಿರುಗಿ ಓಡಿಬಂದನು. ಅವನೂ ಅಂತೆಯೇ ಉಡುಗೆಯನ್ನು ಬದಲಿಸಿರಲಿಲ್ಲ. ಬೇಗ ಬಂದು ಬದಲಿಸಿದನು. ಮರಳಿ ಧಾವಿಸಿದನು. ತಿರುಗಿ ಯಾತರದೋ ಏನೋ ನೆನಪಾಯಿತು. ಇನ್ನೊಮ್ಮೆ ಓಡಿಬಂದನು. ಬಂಜಿಕಾಯಿ(ತೆಂಗಿನ)ಗಳನ್ನು ಎತ್ತಿಕೊಂಡು ನಡೆದನು. ಅವನಿಗೆ ಚೆನ್ನಾಗಿ ಈಜು ಬರುತ್ತಿರಲಿಲ್ಲ. ಅದಕ್ಕಾಗಿ ಅವೆರಡನ್ನು ಬರುವಾಗಲೇ ಹೊತ್ತುತಂದಿದ್ದನು. ಅವನ್ನು ಕಟ್ಟಿಕೊಳ್ಳುತ್ತ ಕಟ್ಟಿಕೊಳ್ಳುತ್ತ ನೀರಿನ ಕಡೆಗೋಡಿದನು. ಅಷ್ಟರಲ್ಲಿ ಶಂಕರನು—'ಹರಿ, ಹರಿ — ಓ ಅದು' — ಎಂದು ಕೈಸನ್ನೆಮಾಡಿ ಏನನ್ನೋ ತೋರಿಸಿದನು. ಒಂದು ಕೆಲಸ ಮುಗಿಯುವಷ್ಟರಲ್ಲಿ ಇನ್ನೊಂದಕ್ಕಾಗಿ ಮರಳಿಬಂದನು. ಬಂದು ಒಯ್ದುದು ಏನನ್ನು ಬಲ್ಲಿರಾ? ಬಿಸ್ಕಿಟಿನ ಡಬ್ಬಿ! ತಿನ್ನುವ ಕೆಲಸವೂ ನೀರಲ್ಲಾಗಬೇಕು! ಸರಿ, ಡಬ್ಬಿ ಬರಲು ಕಾಗೆಗಳಂತೆ ಬಾಲಕರು ಕವಿದರು. ಮರುಕ್ಷಣವೇ ಬರಿ ಡಬ್ಬಿಯು ದೋಣಿಯಂತೆ ಅಲೆಗಳ ಮೇಲೆ ಕುಣಿದಾಡತೊಡಗಿತು.

ಎಲ್ಲರೂ ಮುಂದರಿದರು. ಘರ್ಜಿಸಿ ನುಂಂದೊತ್ತಿ ಬರುವ ತೆರೆಗಳೊಡನೆ ಸ್ಪರ್ಧಿಸಲು ನಿಂತರು; ಕೂಗಿದರು; ಕುಣಿದರು. ಉಪ್ಪುನೀರನ್ನೂ ಇಷ್ಟಿಷ್ಟು ಕುಡಿದರು!

ಬಂಡಿಯಲ್ಲಿ ಈ ಬಾಲಕರಿಗೆ ಸಂಧಿಸಿದ ಮುದುಕನ ಮನೆಯು ಅದೇ ಕಡಲ ತೀರದ ಗಾಳಿತೋಟದಲ್ಲಿತ್ತು. ಅವನು ಮನೆಗೆ ಬರುತ್ತಲೇ, ಹಾದಿಯಲ್ಲಿ ಚೆಲ್ಲಾಪಿಲ್ಲಿಯಾಗಿ ಚೆದರಿದ ಬಾಲಕರ ಉಡುಗೆತೊಡುಗೆಗಳನ್ನು ಕಂಡನು. ಕಡಲಕಡೆಗೆ ಕಣ್ಣಿಟ್ಟು ನೋಡಲು ಹತ್ತೆಂಟು ತಲೆಗಳು ಕಾಣಿಸಿದುವು. ಮುದುಕನು ಗಾಬರಿಯಿಂದ ಕಡಲದಡಕ್ಕೆ ಓಡಿದನು. ನೀರಿಗೆ ನಾಲ್ಕು ಗಜ ದೂರದಲ್ಲಿಯೇ ನಿಂತು ಕೂಗಿದನು. "ಬನ್ನಿ ಮಕ್ಕಳೇ; ಇಲ್ಲಿ ಸ್ನಾನಮಾಡಬೇಡಿ. ಮನುಷ್ಯರನ್ನು ನುಂಗುವ ಮಾರಿಯಿದು" .. ಎಂದನು. ಆದರೆ ವಯಸ್ಸಿನಿಂದ ಕುಗ್ಗಿದ ಅವನ ಸ್ವರವು ಯಾರಿಗೆ ಕೇಳಿಸಬೇಕು? ಆದರೂ ಮುದುಕನಿಗೆ ಸಮಾಧಾನವಾಗಲಿಲ್ಲ ಇನ್ನಷ್ಟು ಕೂಗಿದನು. ಎಲ್ಲವೂ ವ್ಯರ್ಥವಾಗಲು, ಅವರ ಆಟವನ್ನಾದರೂ ಕಂಡು ದಣಿಯುವೆನೆಂದು ಅಲ್ಲೇ ನೀರಿಗೆ ಚಾಚಿನಿಂತ ಪುಟ್ಟ ಬಂಡೆಯೊಂದರ ಮೇಲೆ ಹೋಗಿ ಕುಳಿತನು.

ನಿಮಿಷಕ್ಕೆ ನಾಲ್ಕುಬಾರಿ ಅಲೆಗಳು ಬಂದು ಅಪ್ಪಳಿಸಿ ಮನೆಯಷ್ಟು ಎತ್ತರಕ್ಕೆ ನೀರನ್ನು ಚೆಲ್ಲುತ್ತಿದ್ದುವು. ಮುದುಕನು ಒಮ್ಮೆ ಅವನ್ನು ನೋಡುವನು, ಇನ್ನೊಮ್ಮೆ ಬಾಲಕರನ್ನು ನೋಡುವನು. ಅವನ ಮನದಲ್ಲಿ ಏನೆಲ್ಲ ಕಲ್ಪನೆಗಳು ಬಂದುವು. ಕಣ್ಣಿಂದ ನೀರೂ ಬಂದಿತು. ಅವನಾಗ ತನ್ನ ಹದಿನಾರು ವರುಷದ ಬಾಲಕನ ಸ್ಮರಣೆಮಾಡುತ್ತಿದ್ದನು. ನಾಲ್ಕು ವರುಷಗಳ ಹಿಂದೆ ನಡೆದ ಸಂಗತಿ. ಅವನ ಜೀವನಸರ್ವಸ್ವವಾಗಿದ ಹುಡುಗನೊಬ್ಬನು ಅದೇ ಸ್ಥಳದಲ್ಲಿ ಸ್ನಾನಮಾಡುತ್ತಿದ್ದನು. ಈತನೂ ಮಗುವಿನ ಆಟವನ್ನು ಅದೇ ದಿನ್ನೆಯ ಮೇಲಿಂದ ನೋಡುತ್ತಿದ್ದನು. ಆಗ ಬಲವಾದೊಂದು ಅಲೆಯು ಬಂದು ಆ ಬಾಲಕನನ್ನು ಸೆಳೆದೊಯ್ದುಬಿಟ್ಟಿತು. ಅವನ ಜೀವನದ ದೀವಿಗೆಯು ಕಡಲತಾಯಿಗೆ ಬಲಿಯಾಗಿ ನೊಂದಿಹೋಯಿತು. ಅಂದಿನಿಂದ ಕಡಲತಡಿಯಲ್ಲಿರುವನಾದರೂ ಕಡಲನ್ನು ಮಮತೆಯಿಂದ ಮುಖವೆತ್ತಿ

ಕಂಡವನಲ್ಲ. ಇಂದು ಈ ಮಕ್ಕಳ ಆಟಕುಣಿದಾಟಗಳನ್ನು ಕಂಡು ಮನವು ಪ್ರಸನ್ನವಾಗಿದ್ದುದರಿಂದ ಅಲ್ಲಿಯ ತನಕ ಬಂದಿದ್ದನು. ಆದರೆ ಈ ಗತಸ್ಮರಣೆಯು ಬಂದು ಅವನ ಒಡಲನ್ನು ಅಪ್ಪಳಿಸಿಬಿಟ್ಟಿತು. ಆದೇ ವಿಸ್ಮರಣೆಯಿಂದ– “ನನ್ನ ಮಗು, ನನ್ನ ಮಗು”—ಎಂದು ಚೀರಿಬಿಟ್ಟನು. ಅವನ ಒಡಲನ್ನು ಕತ್ತರಿಸಿ ಹೊರಟ ಈ ಧನಿಯು ಅವರೆಲ್ಲರನ್ನೂ ನಾಟಿತು. ಏನು ಏನೆಂದು ಅವರು ಅತ್ತಿತ್ತ ಕಂಡರು. ಗಾಬರಿಯಾಯಿತು. ಭಯವಾಯಿತು. ಏನೂ ಕಾಣಿಸಲಿಲ್ಲ. ಸ್ವರವು ಹೊರಟ ಕಡೆಗೆ ಕಿವಿಗೊಟ್ಟರು. ಇನ್ನೂ ಮುದುಕನು ಪಶ್ಚಿಮಕ್ಕೆ ಕೈನೀಡಿ -“ನನ್ನ ಮಗು, ನನ್ನ ಮಗು” ಎನ್ನುತ್ತಿದ್ದನು. ಇವರೂ ನೋಡಿದರು ನಿಜಕ್ಕೂ. ಅವರಲ್ಲೊಬ್ಬನಿಗೆ ಆಪತ್ತು ಬಂದಿತ್ತು. ಹರಿಯು ತೊಟ್ಟ ಕಾಯಿಗಳು, ಸಡಿಲಾಗಿ ಬಿದ್ದುಹೋಗಿದ್ದುವು ಅವನೀಗ ಕಡಲಕಾಣಿಕೆಯಾಗುವುದರಲ್ಲಿದ್ದನು. ಹುಡುಗರು ಮುಖಮುಖ ಕಾಣತೊಡಗಿದರು. ಕಂಡರೇನು ಉಪಯೋಗ? ನಿಧಾನಿಸಿದರೆ ಕೆಲಸವು ಕೆಟ್ಟೀತೆಂದು ಶಂಕರನು ಮುಂದೆ ಧುಮುಕಿದನು. ಅವನು ಬಳಿ ಸೇರುವುದರಲ್ಲಿ, ಹರಿಗೆ ಒಮ್ಮೆ ತೀರ್ಥಪ್ರಾಶನವಾಗಿತ್ತು. ಶಂಕರನು ಹರಿಗೆ ಕೈನೀಡಿದನು. ಹರಿಯು ಅವನನ್ನೇ ಬಿಗಿದಪ್ಪಿದನು. ಅದರಿಂದ ತಪ್ಪಿಸಿಕೊಳ್ಳುವುದು ಕಠಿಣವಾಯಿತು. ಆದರೂ ಸಾಹಸಮಾಡಿ ತಪ್ಪಿಸಿಕೊಂಡು, ಅವನನ್ನು ಸೆಳೆದುಕೊಂಡು ತಡಿಗೆ ಸಾಗಿಸಿದನು. ಅಲೆಗಳು ಪ್ರತಿಹೆಜ್ಜೆಗೂ ಪ್ರತಿಕೂಲವಾಗಿದ್ದುವು. ಅಷ್ಟರಲ್ಲೇ ಉಳಿದ ಗೆಳೆಯರು, ಬಟ್ಟೆಗಳನ್ನು ಸಂದುಗೂಡಿಸಿ ಅವನ ಕಡೆಗೆ ಎಸೆದರು. ಅಂತು ಇಬ್ಬರೂ ಪಾರಾದರು. ಹರಿಯನ್ನು ಎತ್ತಿತಂದು ಮರಳದಂಡೆಯಮೇಲೆ ಮಲಗಿಸಿದರು. ಹರಿಗೆ ಗಾಬರಿಯಾಗಿತ್ತು. ಸಾಯುವೆನೆಂಬ ಭೀತಿಯಾಗಿತ್ತು, ಆದರೆ ಅಪಾಯವಾಗಿದ್ದಿರಲಿಲ್ಲ. ಕಣ್ಣುತೆರೆದು ಗೆಳೆಯರನ್ನು ನೋಡಿದನು; ಎಲ್ಲರೂ ಗೊಳ್ಳೆಂದು ನಕ್ಕರು. ಅವನಿಗೂ ನಗುಬಂದಿತು. ಅಷ್ಟರಲ್ಲಿ ಮುದುಕನು ಅವರನ್ನು ಸೇರಿದನು. ಅವನು ಕೂಗಿದುದು ತನ್ನ ಮಗುವನ್ನು ಸ್ಮರಿಸಿ; ಈಗ ನೋಡುವುದು ಅನ್ಯರ ಮಗುವನ್ನು. ಬಳಿಗೆ ಬಂದನು. ಅದು ತನ್ನನ್ನು ಬಂಡಿಯಿಂದಿಳಿಸಿದ ಪುಟ್ಟ ಹರಿಯು!

ಈ ಅಪಶಕುನವು ಅವರೆಲ್ಲರ ಉತ್ಸಾಹವನ್ನು ಕೆಡಿಸಿತು. ಅವರು ಕಡಲನ್ನು ಮರೆತು ತಮ್ಮ ಶಿಬಿರವನ್ನು ಸೇರಿದರು. "ಇಂದಿನ ಅವಸ್ಥೆಯೇ ಸಾಕು, ಊರಿಗೆ ಮರಳುವಾ"—ಎಂದರು. ಹರಿಗೆ ಇದು ತನ್ನಿಂದಾವ ಅಪ ಶಕುನದ ನಿಮಿತ್ತವೆಂದು ತಿಳಿಯಿತು. ಅದಕ್ಕಾಗಿ ಬೇಸರಗೊಂಡು— "ಖಂಡಿತವಾಗಿ ಮರಳಬಾರದು. ನಾಳೆಯ ಹೊರತು ಮರಳಬಾರದು"— ಎಂದನು. ಅದಕ್ಕೆ ಶಂಕರನ ಒಪ್ಪಿಗೆಯೂ ದೊರೆಯಿತು ಅಂತು ಕಡಲ ಸ್ನಾನಕ್ಕೊಂದು ಅವಸಾನ ಬಂದಿತೇ ಹೊರತು ಅವರ ಉತ್ಸಾಹಕ್ಕೆ ಬರಲಿಲ್ಲ. ಒಂದೆರಡು ನಿಮಿಷಗಳಲ್ಲೇ, ಅವರಲ್ಲೊಬ್ಬನು ನೆಲದ ಮೇಲೆ ಈಜಿದನು. ಇನ್ನೊಬ್ಬನು ಮುದುಕನಾಗಿ—"ನನ್ನ ಮಗು ನನ್ನ ಮಗು" ಎಂದು ಕೂಗಿ ದನು. ಇನ್ನೊಬ್ಬನು ಈಜಲು ಹೋಗಿ ಕೈಬಡಿಯುತ್ತಿದ್ದವನನ್ನು ಹಿಡಿಯಲು ಹೋದನು. ಉಳಿದವರೆಲ್ಲ ಸೇರಿ ಅವರಿಬ್ಬರನ್ನು ಮರಳರಾಶಿಯ ಮೇಲೆ ಎಳೆದುಕೊಂಡು ಬಂದರು. ಒಬ್ಬನು ಸತ್ತನು. ಇನ್ನೊಬ್ಬನು ಉಳಿದನು. ಸತ್ತವನಿಗಾಗಿ, ಗುಂಪು ಸೇರಿ ಉಳಿದವರು ಅತ್ತರು. ಈ ಬಾರಿ ಸತ್ತವನು "ಶಂಕರ"ನು. ನಾಲಗೆ ಹೊರಗೆ ಬಿದ್ದಿದೆ! ಹಲ್ಲು ಕಚ್ಚಿದೆ! ಕಣ್ಣು ಬಿಳಿದಾಗಿದೆ! ಗೋಳೇ ಗೋಳು. ದೂರದಿಂದ ನಾಲ್ಕಾರು ಮಂದಿ ಹಳ್ಳಿಗರು ಓಡಿಬಂದರು. ಮುದುಕನು ಗಾಬರಿಯಾಗಿ ಓಡಿಬಂದನು. ಎಲ್ಲರೂ ನೋಡುತ್ತಾರೆ ಶಂಕರನನ್ನು! ಹೆಣಕ್ಕೆ ನಗುಬಂದಿತು! ಎಲ್ಲರೂ ನಕ್ಕರು ಮುದುಕನೂ ನಕ್ಕನು! ಆ ದಿನ ಸಂಜೆಯೊಳಗೆ ಹದಿನೈದು ಸಾವುಗಳಾದುವು. ಇದ್ದವರ ಸಂಖ್ಯೆ ಹತ್ತು ಮಾತ್ರ.

ಸತ್ತು ಸತ್ತು ಬೇಸರವಾಗಲು, ತಿಂಡಿಯ ಚೀಲವನ್ನು ತೆಗೆದರು. ಒಂಟೆಯಂತೆ ಚೀಲಗಳನ್ನು ತುಂಬಿಸಿಕೊಂಡರು. ಇನ್ನು ಉಂಡುದನ್ನು ಕರಗಿಸಿಕೊಳ್ಳಲು ಅತ್ತಿತ್ತ ಓಡಾಡತೊಡಗಿದರು. ಆಡಿ ಓಡಿ ಬೇಸರ ವಾಯಿತು. ಆದರೆ ತುಂಬಿದ್ದ ಉತ್ಸಾಹ ತಗ್ಗದು.

ಇನ್ನು ತಾರ್ಕಿಕ ಸಭೆಗೆ ಕುಳಿತರು. 'ಕತ್ತಿ, ಲೇಖನಿ;' 'ಹಳ್ಳಿ, ನಗರ;' 'ಇಡ್ಲಿ, ದೋಸೆ;' 'ತುಪ್ಪ, ಚಟ್ಣ'—ಎಲ್ಲಾ ವಿಷಯಗಳಲ್ಲೂ ತರ್ಕವಿತರ್ಕ ಗಳಾದುವು. ಹೊಸ ವಿಷಯುವೇ ಇಲ್ಲವೆನ್ನುವಾಗ ಒಬ್ಬನು ನವೀನ ಸೂಚನೆ

ಯನ್ನು ಮಾಡಿದನು. "ನೀರಿನಲ್ಲಿ ಈಜಾಡಿ ಪ್ರಾಣಬಿಡುವುದು ಒಳಿತೋ, ನೆಲದ ಮೇಲೆ ಈಜಾಡಿ ಸಾಯುವುದು ಒಳಿತೋ" ಎಂಬ ವಿಷಯವು ಚರ್ಚೆಗೆ ಬಂದಿತು. ವಿಷಯವನ್ನು ತೆರೆಯುವವನು ಹರಿಯೇ ಆಗಬೇಕಂತೆ! ಹರಿ ಮಾತಾಡಿದನು. "ನೀರಲ್ಲಿ ಸಾಯುವುದೇ ಲೇಸೆ"ಂದನು. ಉಳಿದವರು—"ಹಾಗಾದರೆ ನಡಿ, ಹಲ್ವಾ ಡಬ್ಬಿಯನ್ನು ತೆರೆಯುವುದರೊಳಗೆ ಸತ್ತುಬಿಡು"—ಎಂದರು. ತಿರುಗಿ ನಗುವಿನ ಹಬ್ಬ!

ಇವರ ಆಟವನ್ನು ಕಾಣುತ್ತ ಸೂರ್ಯನು ಮುಣುಗಿಬಿಟ್ಟನು. ಆ ದಿವಸದ ತಾಸಿಗೆ ೨೦ ನಿಮಿಷಗಳಂತೆ! ಸಂಜೆಯಾಗಲು, ಕಡಲ ತಂಗಾಳಿ ಬೀಸತೊಡಗಿತು. ತಿರುಗಿ ಅವರಿರುವಲ್ಲಿಗೆ ಮುದುಕನು ಬಂದನು. "ನಮ್ಮ ಮನೆಯ ಅಂಗಣಕ್ಕಾದರೂ ಬನ್ನಿ. ಇಲ್ಲಿನ ಈ ತಂಡಿಗಾಳಿಯಲ್ಲಿ ಮಲಗಬೇಡಿ" ಅಂದನು. ಸರಿ ವಿಷಯವನ್ನು ಮತಕ್ಕೆ (Voting) ಹಾಕಿದರು. ಮುದುಕನ ಪಾಲಿಗೆ ಒಂದಿಲ್ಲದ ಹತ್ತು ಮತಗಳು; ಉಳಿದವರ ಪಾಲಿಗೆ ಬಂದಿರುವ ಸೊನ್ನೆ ಮತಗಳು! ಠರಾವು ಬಿದ್ದುಹೋಯಿತು. ಹೆಕ್ಕಿದವರಿಲ್ಲ.

ಅವರು ನಿದ್ದೆಹೋಗುವಾಗ ಅಷ್ಟಮಿಯ ಚಂದ್ರನು ಕಂತಿದ್ದನು. ಮಲಗಿದರು. ಹರಿಯು ಶಂಕರನ ಬಳಿ ಮಗುವಿನಂತೆ ಮುದುರಿ ಮಲಗಿಕೊಂಡನು. ಬೆಳಗಿನ ಝಾವದಲ್ಲಿ ಛಳಿಗಾಳಿಯು ಜೋರಿನಿಂದ ಬೀಸುತ್ತಿತ್ತು. ಭೂಪತಿಗಳು ಏಳುವಾಗ ಪೊತ್ತುಮೂಡಿತ್ತು. ಎದ್ದು ತಿರುಗಿ ಕುಣಿದಾಡಿದರು. ಆ ದಿನವೂ ಹಾಗೆಯೇ ಕಳೆಯುತ್ತಿತ್ತೋ ಏನೋ. ದರಿದ್ರ ಶಾಲೆಯ ನೆನಪಾಯಿತು. 'ಹೋ'—ಎಂದು ರೈಲ್ವೆ ನಿಲ್ದಾಣಕ್ಕೆ ಓಡಿದರು. ತುಸು ಹೊತ್ತಿನಲ್ಲಿ ಉಗಿಬಂಡಿ ಬಂದಿತು. ಅವರೆಲ್ಲರನ್ನೂ ಮಂಗಳೂರಿಗೆ ಒಯ್ದಿತು. ಇನ್ನೊಂದು ಆದಿತ್ಯವಾರ ಬಂದಾಗ ಅವರಿಗೆ ಕಳೆದುಹೋದ ಈ ದಿನದ ನೆನಪೇ ಆಗಲಿಲ್ಲ. ಆದರೆ ಅವರಲ್ಲಿ ಉಳಿದ ಒಂದೇ ವಸ್ತುವೆಂದರೆ ಹರಿಶಂಕರರ ಗೆಳೆತನ ಅದು ಅವರ ಜೀವನದಲ್ಲಿ ಅಳಿಯಲಾರದ ಸಂಕಲೆಯಾಯಿತು.

ಶಂಕರನು ಅದು ಮೊದಲು ಬೇರೊಂದು ಹಾಸ್ಟೆಲಿನಲ್ಲಿ ವಾಸಮಾಡುತ್ತಿದ್ದನು. ಈಗ ಹರಿಯ ಮೇಲಣ ಪ್ರೇಮಕ್ಕಾಗಿ ಅವನಿರುವ ಭವನವನ್ನು

ಸೇರಿದನು. ಅಂದಿನಿಂದ ಅವರು ಶಾಲೆಯೊಂದರಲ್ಲಿ ಬಿಟ್ಟು, ಉಳಿದ ಎಲ್ಲೆಡೆಗಳಲ್ಲೂ ಜತೆಯಾಗಿಯೇ ಚರಿಸುತ್ತಿದ್ದರು.

ಅವರ ಗೆಳೆತನದ ದಿನಗಳು ಆನಂದದಿಂದ ಕಳೆದುವು. ಇಬ್ಬರೂ ಹಳ್ಳಿಗಾಡಿನ ಸರಳಜೀವಿಗಳು. ಮನಸ್ಸಿನಲ್ಲಿ ಕಪಟವಂಚನೆಗಳಿರಲಿಲ್ಲ. ಹರಿಯು ತನ್ನ ಸುಖದುಃಖಗಳಿದ್ದರೆ ಬಚ್ಚಿಡದೆ ಶಂಕರಗೆ ಹೇಳುವನು; ಶಂಕರನೂ ಅದೇ ನಡತೆಯ ಪ್ರತಿಬಿಂಬವು. ಹರಿಯು ಬಡವರ ಮನೆಯ ಹುಡುಗನು. ಅವನಿಗೆ ಮನೆಯಿಂದ ಸರಿಯಾದ ಸಹಾಯವು ಬರುತ್ತಿರಲಿಲ್ಲ. ಎಷ್ಟೋ ಬಾರಿ ಅದಕ್ಕಾಗಿಯೇ ವ್ಯಾಸಂಗವನ್ನು ಬಿಡುವ ಯೋಚನೆಯನ್ನೂ ಮಾಡಿದನು. ಆದರೆ ಶಂಕರನು ಆ ರೀತಿ ಮಾಡಲು ಬಿಡನು ತನಗೆ ಮನೆಯವರು ಕೊಡುತ್ತಿದ್ದ ಪ್ರತಿ ಹೆಚ್ಚಿನ ಕಾಸನ್ನು ಹರಿಯ ಸಲುವಾಗಿ ವ್ಯಯಿಸುತ್ತಿದ್ದನು. ಈಗ ಹರಿಗೆ ಹದಿನೈದು ವಯಸ್ಸು. ಶಂಕರನು ಅವನಿಂದ ಒಂದು ವರುಷಕ್ಕೆ ಹಿರಿಯನು. ಹರಿಯು ಓದುತ್ತಿರುವುದು V ಫಾರ್ಮಿನಲ್ಲಿ, ಶಂಕರನು ಅದರ ಮುಂದಿನ ತರಗತಿಯಲ್ಲಿ. ಹರಿಯು ಬಡವನಿದ್ದಂತೆ ಶರೀರಬಲದಲ್ಲೂ ತುಸು ದುರ್ಬಲನೇ ಶಂಕರನು ಶ್ರೀಮಂತನಿದ್ದಂತೆ ದೃಢಕಾಯನೂ ಅಹುದು. ಎಷ್ಟೋ ಬಾರಿ ತನ್ನ ಚಿಕ್ಕ ಗೆಳೆಯನ ರಕ್ಷಣೆಗಾಗಿಯೇ ತಾನು ಹುಟ್ಟಿದವನು ಎಂದು ಅವನು ತಿಳಿದುದೂ ಉಂಟು. ಅಂಥ ಪರೀಕ್ಷೆಯ ದಿನವು ಬಂದಿತು. ಒಂದು ದಿನ ಆಕಸ್ಮಿಕವಾಗಿ ಹರಿಯು ವಿಷಮಜ್ವರ ಪೀಡಿತನಾದನು. ಜ್ವರವು ದಿನೇ ದಿನೇ ಬೆಳೆಯಿತು. ವೈದ್ಯರನ್ನು ಕರೆಯಿಸದೆ ಮಾರ್ಗವಿದ್ದಿರಲಿಲ್ಲ. ಕರೆಯಿಸುವುದೆಂದರೆ ತನ್ನಿಂದ ಅಸಾಧ್ಯದ ಮಾತು. ಶಂಕರನು ಕರೆಯಿಸಬೇಕು ಆದರೆ ಅದಕ್ಕೆ ಬೇಕಾಗುವ ಅಷ್ಟೊಂದು ಹಣವನ್ನು ಅವನು ತನಗಾಗಿ ವ್ಯಯಿಸುವುದು ಸರಿಯೆಂದು ತೋರಲಿಲ್ಲ. ಒಂದು ಹೊತ್ತು ಅವನನ್ನು ಬಳಿಗೆ ಕರೆದು—"ಶಂಕರಾ— ನನ್ನನ್ನು ಊರಿಗೆ ಕಳುಹಿಸಿಕೊಡು. ನಿನ್ನ ಪರೀಕ್ಷೆಯು ಸಮೀಪಿಸಿತು"— ಎಂದನು. ಶಂಕರನು ಹರಿಯ ಮೋರೆಯನ್ನೇ ಕಂಡನು. ಮನೆಯಲ್ಲಿ ಹರಿಯ ಮುದಿತಾಯಿಯಲ್ಲದೆ ಇನ್ನಾರಿಲ್ಲವೆಂಬುದು ಅವನಿಗೆ ತಿಳಿದಿತ್ತು. ಅಲ್ಲಿಗೆ ಕಳುಹಿಸಿದಲ್ಲಿ ಹರಿಯ ಆರೈಕೆಯು ಚೆನ್ನಾಗಿ ನಡೆಯದು ಎಂದೂ

ತಿಳಿದಿದ್ದನು. ಆದರಿಂದವನು - "ನೀನು ಸುಮ್ಮನಿರು. ವೈದ್ಯರನ್ನು ಬರ ಹೇಳಿರುವೆ. ಅವರು ಬರಲಿ. ಅವರನ್ನು ಕೇಳಿನೋಡುವ"— ಎಂದನು. "ವೈದ್ಯರೇ!" ಎಂದು ಹರಿಯು ಗಾಬರಿಯಾದನು. ಆ ಗಾಬರಿಯ ಅರ್ಥವು ಶಂಕರಗೆ ಹೊಳೆಯಿತು. "ಹರಿ, ಅದನ್ನೆಲ್ಲಾ ಮನಸ್ಸಿಗೆ ಹಚ್ಚಿಕೊಳ್ಳಬೇಡ"— ಎಂದನು. ಹರಿಯು ತಿರುಗಿ "ಅಹುದು, ಆದರೆ ನಿನ್ನ ಮನೆಯವರು ಅಷ್ಟು ಹಣವನ್ನು ಹೆರವರಿಗಾಗಿ ಹಾಳುಮಾಡಿದೆಯೇಕೆಂದು ಕೇಳರೇ?"— ಎಂದನು. ನಿಜವಾಗಿಯೂ ಕೇಳುತ್ತಿದ್ದರು. ಆ ಯೋಚನೆಯು ಶಂಕರ ನಿಗೂ ಬಂದಿತು. ಅಷ್ಟರಲ್ಲಿ ವೈದ್ಯರು ಬಂದುದರಿಂದ ಪ್ರಸ್ತಾಪವು ನಿಂತಿತು. ವೈದ್ಯರು ಹರಿಯನ್ನು ಪರೀಕ್ಷಿಸಿದರು. ಅವನು ಹಾಸುಗೆಯಿಂದ ಕದಲ ಕೂಡದೆಂದು ಅಪ್ಪಣೆಯಾಯಿತು. ಹರಿಯು ಮಾತನಾಡಲಿಲ್ಲ ಇನ್ನೆರಡು ದಿನಕ್ಕೆ ಶಂಕರನ S. S. L. C. ಪರೀಕ್ಷೆಯು ಬಂದಿತು. ಹರಿಗೆ ಅದು ತಿಳಿ ದಿತ್ತು. ಪರೀಕ್ಷೆಯ ದಿನ ಅವನು ಅಳುತ್ತ - "ಶಂಕರಾ, ದಮ್ಮಯ್ಯ, ಪರೀಕ್ಷೆ ತಪ್ಪಿಸಬೇಡ"ಎಂದನು. ಅವನು ತಪ್ಪಿಸದಿದ್ದರೆ, ತನ್ನ ಆರೈಕೆಗೆ ಬೇರೆ ಯಾವ ಬಾಲಕರೂ ನೆರವಾಗಲೆಂದು ಖಂಡಿತವಾಗಿಯೂ ತಿಳಿದಿದ್ದನು. ಆದರೆ ತನ್ನ ಸಲುವಾಗಿ ತನ್ನ ಗೆಳೆಯನ ಸುಖವನ್ನು ಹಾಳುಮಾಡುವ ಮನವು ಅವನದಲ್ಲ. ಇದಕ್ಕೂ ಶಂಕರನು—"ಡಾಕ್ಟರರು ಹೇಳಲಿ" ಎಂದನು. ಜ್ವರದ ವೈಪರೀತ್ಯದಿಂದ ಒಮ್ಮೊಮ್ಮೆ ಹರಿಗೆ ಸ್ಮೃತಿಭ್ರಂಶವಾಗುತ್ತಿತ್ತು. ಆ ಕಾರಣ, ಶಂಕರನು ಅವನನ್ನು ಬಿಟ್ಟುಹೋಗುವ ಪ್ರಶ್ನೆಯೇ ಇದ್ದಿರಲಿಲ್ಲ. ಸರಿ, ಗೆಳೆತನದ ಪರೀಕ್ಷೆಗಾಗಿ ಶಂಕರನು ಶಾಲಾಪರೀಕ್ಷೆಯನ್ನು ಮರೆತನು. ಆದು ಹರಿಗೆ ಅಸಹನೀಯವಾಯಿತು ತನ್ನಿಂದ ಶಂಕರನು ತಂದೆತಾಯಿಗಳ ಶಾಪಕ್ಕೆ ಗುರಿಯಾಗುವೆನೆಂದು ಶಪಿಸಿಕೊಂಡನು.

ಕೆಲವು ದಿನಗಳಲ್ಲಿ ಹರಿಯ ಜ್ವರವು ಬಿಟ್ಟಿತು. ಶಂಕರಗೆ ಹತ್ತು ಬಾರಿ ಪರೀಕ್ಷೆಯಲ್ಲಿ ತೇರ್ಗಡೆಯಾದಷ್ಟು ಆನಂದವಾಯಿತು. ದೊಡ್ಡ ರಜೆ ಬರಲು ಅವರಿಬ್ಬರೂ ಊರಿಗೆ ತೆರಳಿದರು. ರಜಾಕಾಲದಲ್ಲಿ, ಹರಿಯು ತಾಯಿಯ ಬಳಿಗೆ ಒಂದೆರಡು ಬಾರಿ ಹೋಗಿದ್ದನು. ಅದೂ ಶಂಕರನ ಜತೆ ಯಲ್ಲಿ! ಆ ಮುದುಕಿಗೆ, ತನ್ನ ಮಗುವನ್ನು ಎರಡೆರಡು ಬಾರಿ ಬದುಕಿಸಿದ

ಶಂಕರನ ಮೇಲೆ ಮಮತೆ ಉಕ್ಕಿಬಂದಿತು. ಕ್ಷಣವೆಂಬಂತೆ ರಜಾದಿನಗಳು ಕಳೆದುವು.

ತಿರುಗಿ ಶಾಲೆಯ ಪ್ರಾರಂಭ. ಹರಿಶಂಕರರು ಈಗ ಸಹಪಾಠಿಗಳಾದರು. ಕಾಯಿಲೆಯ ನಿಮಿತ್ತ ಹರಿಗೆ ಪರೀಕ್ಷೆಯಿಂದ ವಿನಾಯತಿ ದೊರೆಯಿತು. ಕಾಯಿಲೆಯವನನ್ನು ಆರೈಕೆಮಾಡಿದುದಕ್ಕಾಗಿ ಶಂಕರಗೆ ವಿನಾಯತಿಯೆಲ್ಲಿ? ಆದರೆ ಗೆಳೆಯನು ಸಹಪಾಠಿಯಾದನೆಂಬ ಆನಂದ. ಇತ್ತ! ಮನೆಯವರೊಡನೆ ಪರೀಕ್ಷೆಗೆ ಕುಳಿತಿರಲಿಲ್ಲವೆಂದು ತಿಳಿಸಲೇ ಇಲ್ಲ. ಈಗ ಉಪಾಯಗಾಣದೆ—"ಪರೀಕ್ಷೆಯಲ್ಲಿ ತೇರ್ಗಡೆಯಾಗಲಿಲ್ಲೆಂದು" ಬರೆದನು. ಮನೆಯಿಂದ ನಿಷ್ಠುರದ ಪತ್ರಬಂದಿತು. ಅದನ್ನು ಬಚ್ಚಿಟ್ಟುಕೊಂಡು ಶಂಕರನು ಒಳಗೊಳಗೆ ನಕ್ಕನು. ಒಂದು ದಿನ ಆಕಸ್ಮಿಕವಾಗಿ ಆ ಕಾಗದವು ಹರಿಯ ಕೈಗೆ ಸಿಕ್ಕಿತು. ಅವನು ಆ ದಿನ ಅತ್ತುದಕ್ಕೆ ಮಿತಿಯಿಲ್ಲ. ಎಂಥ ಒಡಲುಗಳೆರಡು!

ವರುಷವು ಸಾಗಲು ಇಬ್ಬರೂ ಪರೀಕ್ಷೆಗೆ ಕುಳಿತರು. ವರುಷಾಂತ್ಯದ ದೊಡ್ಡ ರಜೆಬರಲು ಊರಿಗೆ ಹೋದರು. ಈ ಬಾರಿ ಅವರಿಬ್ಬರು ಹರಿಯ ಮನೆಯಲ್ಲಿ ಹತ್ತು ದಿನಗಳನ್ನು ಕಳೆದರು. ಮುಂದೇನು?—ಎಂಬ ಪ್ರಶ್ನೆ. ಹರಿಯು ವಿದ್ಯೆಯನ್ನು ಮುಗಿಸಿ ನೌಕರಿಯನ್ನು ಹುಡುಕುವ ನಿರ್ಣಯವಾಯಿತು. ತಾನೇ ಯಜಮಾನನಾಗಿದ್ದರೆ ಶಂಕರನು ಅವನಿಗೆ ಬಿ ಎ. ತನಕ ನಿಶ್ಚಯವಾಗಿಯೂ ಸಹಾಯಮಾಡುತ್ತಿದ್ದನು. ಈಗ ಅದು ಸಾಧ್ಯವಿಲ್ಲ. ಗೆಳೆಯನಿಂದ ದೂರ ಇರಲಾರದೆ ತಾನೂ ವಿದ್ಯೆಯನ್ನು ಮುಗಿಸುವೆನೆಂದು ನಿಶ್ಚಯಿಸಿದನು. ಹರಿಗೆ ಎಲ್ಲಿಲ್ಲದ ಕೋಪಬಂದಿತು. ನೀನು ಹಾಗೆ ಮಾಡುವಿಯಾದರೆ ನಾನು ನಿನ್ನ ಗೆಳೆತನವನ್ನು ಮುರಿಯುವೆನೆಂದನು. ಅವನನ್ನು ಸಮಾಧಾನಪಡಿಸುವುದು ಶಂಕರನಿಗೆ ಅಸಾಧ್ಯವೆನಿಸಿತು. ಇತ್ತ ಸಮಯವು ಬರಲು ಮನೆಯವರ ಆಗ್ರಹದ ಮೇರೆಗೆ ಮದ್ರಾಸಿಗೆ ವ್ಯಾಸಂಗಮುಂದರಿಸಲು ತೆರಳಿದನು. ಮಂಗಳೂರಿನ ತನಕ ಹರಿಯು ಅವನ ಜತೆಯಲ್ಲಿ ಹೋಗಿದ್ದನು. ಅಗಲುವ ಗಳಿಗೆಯು ಬರಲು, ಜನ ನಿಬಿಡವಾದ ರೈಲ್ವೆ ನಿಲ್ದಾಣದಲ್ಲಿ ಇಬ್ಬರೂ ಮಗುವಿನಂತೆ ಅತ್ತರು!

ಬಂಡಿ ಹೊರಟು ಹೋಯಿತು. ಗೆಳೆತನದ ಸಂಕಲೆ ಇನ್ನಷ್ಟು ಬಲ ವಾಯಿತು.

ಇತ್ತ ಹರಿಯು ಉದ್ಯೋಗಕ್ಕಾಗಿ ಹೋರಾಡತೊಡಗಿದನು. ಕೊನೆ ಗೂ ಹಳ್ಳಿಯ ಶಾಲಾ ಉಪಾಧ್ಯಾಯತನವು ದೊರೆಯಿತು. ಅದೂ ತನ್ನೂ ರಿನ ಬಳಿಯಲ್ಲಿ. ಅವನ ತಾಯಿಗೆ ಹಿಡಿಯದ ಹರುಷವಾಯಿತು. ಆದರೆ ಆ ಭಾಗ್ಯವನ್ನು ಕಾಣಲು ಅವಳು ಬಹಳ ದಿನ ಬಾಳಲಿಲ್ಲ. ಕಾಲನು ಅವಳ ಆಯುಷ್ಯದ ಎಣಿಕೆಯನ್ನು ಪೂರ್ಣಮಾಡಿದನು. ಹರಿಯು ತುಂಬಾ ಚಿಂತೆ ಗೀಡಾದನು. ಆಯುಷ್ಯವನ್ನು ತಾಯಿಯ ಸೇವೆಮಾಡಬೇಕೆಂಬ ಅಭಿಲಾಷೆ ಯಿಂದ ಶಾಲೆಗೆ ಹೋದವನು ಅವನು. ಅವನ ಸಿದ್ಧತೆಯಾಯಿತೆಂಬಷ್ಟಕ್ಕೆ ಸೇವೆಯ ಭಾಗ್ಯವು ಮುಗಿಯಬೇಕೆ? ಅದೇ ಚಿಂತೆಯು ಅವನ ಮನಸ್ಸಿನಲ್ಲಿ ಬಲವಾಯಿತು. ಮಂಕನಂತೆ ವಿಹರಿಸತೊಡಗಿದನು. ಆದರೆ ತನಗಾದ ಈ ಆಪತ್ತನ್ನು ಗೆಳೆಯನ ಪಾಲಿಗೆ ಹಂಚಿಕೊಡದೆ ಸುಮ್ಮನಿದ್ದನು ಕೆಲವು ದಿನಗಳಲ್ಲಿ ದೇಹಾಲಸ್ಯವು ತೊಡಗಿತು. ಅವನ ಬೇನೆಗೆ ಕ್ಷೋನೆಯ ಸಂವತ್ಸ ರದ ಹೆಸರನ್ನಿರಿಸಿದರು. ಶರೀರವು ದಿನೇ ದಿನೇ ಕೃಶವಾಗತೊಡಗಿತು. ತನಗೆ ಉಳಿಗಾಲವಿಲ್ಲೆಂಬ ಅರಿವು ಹರಿಯ ಮನಕ್ಕೆ ಉಂಟಾಯಿತು. ಒಮ್ಮೆ ಸಾಹಸಮಾಡಿ ವಿಷಮಜ್ವರದಿಂದ ತನ್ನನ್ನುಳಿಸಿದ ವೈದ್ಯರ ಬಳಿಗೆ ಹೋದನು. ತುಸುಹೊತ್ತು ಅವರಲ್ಲಿ ಮಾತುಕಥೆಗಳಾದುವು. ಹರಿಯ ಮುಖ ಕಳೆ ಗುಂದಿತು. ಅಂತರಂಗದಲ್ಲಿ ರೋದಿಸುತ್ತ ಮನೆಗೆ ಬಂದನು. ಮೆಲ್ಲಗೆಹಾಸು ಗೆಯೇ ಪ್ರಾಪ್ತವಾಯಿತು. ಎಷ್ಟೋ ಬಾರಿ ಗೆಳೆಯನಿಗೆ ಈ ವಿಷಯವನ್ನು ತಿಳಿಸುವ ಮನವಾಯಿತು. ಸುಮ್ಮನಿದ್ದನು. ಪ್ರತಿ ವಾರಕ್ಕೊಮ್ಮೆ ಶಂಕರನ ಪತ್ರ ಬರುತ್ತಿತ್ತು. ಎಲ್ಲವೂ ಕ್ಷೇಮವೆಂದೇ ಬರೆಯುತ್ತಿದ್ದನು. "ತಾಯಿ ಯು ಹೇಗಿರುವಳು?" ಎಂದು ಕೇಳಿದುದಕ್ಕೂ "ಕ್ಷೇಮ"ವೆಂದೇ ಬರೆದನು.

ಒಂದು ದಿನ ಹರಿಗೆ ತೀರ ಹೆಚ್ಚಿನ ಕೆಮ್ಮು ಉಬ್ಬಸಗಳು ತೊಡಗಿದುವು. ಅವನ ಆರೈಕೆಯನ್ನು ನೋಡುವವನೂ, ಅನ್ನ ಬೇಯಿಸುವವನೂ ಅವನೇ ಆದನು. ಆದರೂ ಶಂಕರಗೆ ಸುದ್ದಿಯಿಲ್ಲ. ಒಂದು ದಿನ ತಾಳಲಾರದೆ ವಿಚಿತ್ರವಾದೊಂದು ಪತ್ರಬರೆದನು.

ನವೀನ ಗೆಳೆಯರೊಂದಿಗೆ ಚಕ್ಕಂದವಾಡುವ ಗಳಿಗೆಯಲ್ಲಿ ಆ ಬರಹವು ಶಂಕರನ ಕೈಸೇರಿತು. ಆತುರದಿಂದ ತೆರೆದು ಓದಿದನು. ವಿಚಿತ್ರ ಲೇಖನವೇ ಅದು!

"ಗೆಳೆಯಾ,

ನಿನ್ನ ಉಪಕಾರವನ್ನು ನಾನು ಮರೆಯಲಾರೆ. ಎರಡೆರಡು ಬಾರಿ ನನ್ನ ಪ್ರಾಣವನ್ನು ಉಳಿಸಿದವನು ನೀನು. ನಿನ್ನದು ಅದ್ಭುತ ಗೆಳೆತನವು. ಆದರೆ ಆ ಗೆಳೆತನದ ನೆಲೆಯು ಪೊಳ್ಳು ಬಂಡೆಯೊಂದರ ಮೇಲೆ ಕುಳಿತಿದೆಯೆಂದು ನಾನೀಗ ಅರಿತೆ. ನಮ್ಮದು ದಿವ್ಯ ಪ್ರೇಮವೆಂದೇ ತಿಳಿದಿದ್ದೆ ಆದರೆ ನಿಜಕ್ಕೂ ಹಾಗೆಂದು ಈಗ ಕಾಣುವುದಿಲ್ಲ. ಈ ನನ್ನ ಕೊನೆಯ ಗಳಿಗೆಯಲ್ಲಿ ಅದು ಭಿನ್ನವಾಗಿ ಕಾಣಿಸುತ್ತಿದೆ . . ."

ಶಂಕರನು ಅಲ್ಲಿಂದೆದ್ದು ತನ್ನ ಕೊಟಡಿಗೆ ಹೋಗಿ ಒಂಟಿಯಾಗಿ ಕುಳಿತು ಯೋಚಿಸತೊಡಗಿದನು. ತಮ್ಮ ಗೆಳೆತನವು ನಿಜಪ್ರೇಮವಲ್ಲೆಂಬ ಹರಿಯ ಬರಹವು ಅವನಿಗೆ ತೀರ ಕಠಿಣವಾಗಿ ಕಂಡಿತು. ಮೂಢನಂತೆ ಕುಳಿತನು. ತಿರುಗಿ ಅದೇ ಬರಹವನ್ನು ಎತ್ತಿಹಿಡಿದು ಪೂರ್ಣ ಓದಿ ಮುಗಿಸಿದನು.

". . ಅದು ಭಿನ್ನವಾಗಿ ಕಾಣಿಸುತ್ತಿದೆ. ವೈದ್ಯರು ನನ್ನ ದೇಹಾಲಸ್ಯದ ಕಾರಣವನ್ನು ಸೂಚಿಸಿದಾಗ ಅದು ತಿಳಿಯಿತು. ನನಗೂ ಅಹುದೆಂದು ಕಾಣುವುದು. ನಿನಗೆ ನಾನು ಈ ವರೆಗೆ ಬರೆದಿರಲಿಲ್ಲ—ನಾನು ಅನಾರೋಗ್ಯದಲ್ಲಿರುವೆನೆಂದು. ಬರೆದರೆ ತಿರುಗಿ ನಿನ್ನ ವ್ಯಾಸಂಗವನ್ನು ಬಿಟ್ಟುಬರುವಿಯೆಂಬ ಅಂಜಿಕೆಯಿಂದ. ಇನ್ನು ನೀನು ಬಂದರೂ ನಿನಗೆ ಕಾಣಸಿಗೆನು. ನನಗೀಗ ಕ್ಷಯ . . . ನಿಮಿಷಗಳನ್ನು ಎಣಿಕೆ ಹಾಕುತ್ತಿರುವೆ. ಆದರೆ ನಿನ್ನ ಮೇಲಿನ ಮಮತೆಗಾಗಿ ನಾನು ಒಂದು ಸತ್ಯವನ್ನು ಬರೆಯುದಿರಲಾರೆ. ನಮ್ಮ ಗೆಳೆತನವು ನಿಸ್ವಾರ್ಥವಾಗಿರಲಿಲ್ಲ. ನಮ್ಮ ಪ್ರೇಮವು ಶರೀರಪ್ರೇಮದ ಮಾಯೆಯಿಂದ ಆನಂದಿಸಿತ್ತು. ಅಂದಿನ, ಆ ನಮ್ಮ ಗೆಳೆತನದ ಪ್ರಥಮ ರಾತ್ರಿಯೇ ಇಂದಿನ ನನ್ನ ಜೀವನದ ಪರಿಸಮಾಪ್ತಿಗೆ ಕಾರಣವು. ಹೀಗೆ ಬರೆದುದಕ್ಕೆ ನನ್ನನ್ನು ಕ್ಷಮಿಸುವೆಯಾ?

ಇತಿ ನಿನ್ನ ನೊಂದುವ ದೀಪ."

ಶಂಕರನು ಚೀರಿಬಿಟ್ಟನು! ಮರಣವೇ ಅವನ ಮುಖದ ಎದುರಿಗೆ ನಿಂತಿತು. ಆ ಬರಹದ ಪ್ರತಿ ದುರ್ಬಲ ರೇಖೆಯೂ ಅವನೆದುರಿಗೆ ಯಮ ಲೋಕದ ಪಿಶಾಚಿಯಂತೆ ಕಂಡಿತು. ತನ್ನ ಗೆಳೆಯನ ರಕ್ಷಕನು ತಾನು ಎಂಬ ಅವನ ಅಂತರಂಗದ ಅಹಂಕಾರವು ಮುರಿದು ನುಚ್ಚುನುರಿಯಾಯಿತು! ಭ್ರಾಂತನಂತೆ ಎದ್ದು ರೈಲ್ವೆ ನಿಲ್ದಾಣಕ್ಕೆ ಓಡಿದನು.

ಮರುದಿನ ನಡುರಾತ್ರಿ ಶಂಕರನು ಸಾಹಸಪಟ್ಟು ಗೆಳೆಯನ ಕುಟೀರದ ಮುಂದೆ ಬಂದು ನಿಂತನು. "ಅಜ್ಜೀ," ಎಂದು ಕರೆದನು. ಅಜ್ಜಿಯೆಲ್ಲಿ! ಅವಳ ಯಾತ್ರೆ ಎಂದೇ ಮುಗಿದಿತ್ತು. ಅವಸರದಿಂದ ಒಳಕ್ಕೆ ಕಾಲಿರಿಸಿದನು. ಮಿನುಗುವ ದೀಪವೊಂದರ ಬಳಿ, ಹರಕು ಛಿಂದಿಗಳ ಮೇಲೆ ಅವನ ಜೀವದ ಹರಿಯು ಮಲಗಿದ್ದನು. ಹರಿ! ಎಂದು ಚೀರಿದನು. ಆಗ ಹರಿಗೆ ನಿದ್ದೆ ಬಂದಿತ್ತು. ಅವನ ಬಳಿ ಕುಳಿತನು ಮೆಲ್ಲಗೆ ಅವನ ಶಿರವನ್ನೆತ್ತಿ ತನ್ನ ತೊಡೆಯ ಮೇಲಿರಿಸಿಕೊಂಡನು. ಕಣ್ಣೀರಕಡಲೇ ಉಕ್ಕಿ ಬಂದಿತು. ಅದು ಅವನ ಕಪೋಲವನ್ನು ತೊಳೆದು, ಹರಿಯ ಮರಣಚುಂಬಿತ ಕೆನ್ನೆಗಳನ್ನು ಮುದ್ದಿಸಿತು. ಹರಿಯು ಕಣ್ಣು ತೆರೆದು ನೋಡುವನು. ಗೆಳೆಯನು! ಏಕ ಮಾತ್ರ ಗೆಳೆಯನು! ಎರಡೆರಡು ಬಾರಿ ತನ್ನನ್ನು ಉಳಿಸಿದವನು. ಮೆಲ್ಲನೆ ಶಂಕರನ ಬಾಯಿಯಿಂದ—"ಹರಿ. ತಿಳಿಯಿತೀಗ ನಾನು ನಿನ್ನ ರಕ್ಷಕನಲ್ಲವೆಂದು. ಮುಂದೆ ತಿನ್ನಲು ಇಂದು ರಕ್ಷಿಸುವ ಕಟುಕರಿಗಿಂತ ಪಾಪಿಯು ನಾನು. ನಿನ್ನನ್ನು ರಕ್ಷಿಸುತ್ತಿರುವಾಗಲೇ ಭಕ್ಷಿಸತೊಡಗಿದೆ . . . ಕ್ಷಮೆಯೇ?"—ಎಂದನು. ಹರಿಯಲ್ಲಿ ಅವನು ಕ್ಷಮೆ ಕೇಳುವುದೇಕೆ?

ಅಂದು ಅವರ ಪ್ರೇಮವು ದಿವ್ಯಪ್ರೇಮವಾಯಿತು. ಆದರೆ, ಇನ್ನಾದರೂ, ಶಂಕರನ ಕೊಟಡಿಯ ಗೋಡೆಯಲ್ಲಿ ಒಂದು ಮರೆಯಲಾರದ ಬರಹವಿದೆ. ಅದಿರುವುದು ಹರಿಶಂಕರರು ಕುಳಿತಿರುವ ಭಾವಚಿತ್ರವೊಂದರ ಮೇಲೆ. ಓದುವಿರಾ, ಓದಿರಿ--"ಕುರಿಯೂ, ಕಟುಕನೂ"—ಎಂದು. ಆ ವಿಚಿತ್ರ ಆಖ್ಯೆಯನ್ನು ಕಂಡು ಶಂಕರನ ಗೆಳೆಯರು ಎಂದೆಂದೂ ನಗುವರು ಶಂಕರನು ಮಾತ್ರ ಅವರು ನಕ್ಕಷ್ಟೇ ಅಳುತ್ತಿರುವನು.

---

## ೪. ಮುಕುಂದನ ಆಸೆ.

ಮುಕುಂದನ ಆಸೆ ದೊಡ್ಡದು. ಅವನ ವಿಶ್ವವಿದ್ಯಾಲಯದ ಮೊದಲನೆಯ ಪರೀಕ್ಷೆಯು ಈಗಷ್ಟೆ ಮುಗಿದಿದೆ. ಅವನು ಅದರಲ್ಲಿ ತೇರ್ಗಡೆಯಾಗುವುದೆಂಬುದು ಖಂಡಿತ. ಆ ಚಿಂತೆ ಅವನಿಗಿಲ್ಲ. ಆದರೆ ಅವನ ಆಸೆಯ ಚಿಂತೆ ಅವನಿಗೆ. ಇನ್ನೆರಡು ವರುಷದಲ್ಲಿ ಇಂಟರ್ ಮುಗಿಯಿಸಿ, ಮುಂದೆ ಬಿ ಎ. ಆಗಿ ಅದರ ಬಳಿಕ ವಿದ್ಯೆಯನ್ನು ಮುಂದರಿಸಲು ವಿಲಾಯತಿಗೆ ಹೋಗಬೇಕೆಂಬ ಯೋಚನೆ ಅವನದು. ವಿಲಾಯತಿಯಲ್ಲಿ ಯಾವ ಪರೀಕ್ಷೆಯನ್ನು ಕೊಡಬೇಕೆಂದು ನಿರ್ಣಯಿಸಿರಲಿಲ್ಲ. ಒಂದೂ ಐ ಸಿ. ಯಸ್. ಇಲ್ಲವೆ ಬ್ಯಾರಿಸ್ಟರ್— ಎರಡರಲ್ಲಿ ಒಂದು. ಮೊದಲಿನದರ ಮೇಲೆ ಅವನ ಅಪೇಕ್ಷೆಯು ಅಧಿಕ. ಅವನು ತನ್ನ ಆಸೆಯನ್ನು ಅದರಲ್ಲಿ ಮುಗಿಯಿಸಬೇಕೆಂದು ನಿರ್ಣಯಿಸಿರುವನು. ಆದರೆ ಮಾರುದ್ದದ ಅವನ ಈ ಆಸೆಗೆ ತಕ್ಕ ಅನುಕೂಲತೆಯು ಬೇಕಲ್ಲವೆ? ಯಾರಾದರೂ ಅವನನ್ನು 'ಇಷ್ಟಕ್ಕೆಲ್ಲ ಹಣವೆಲ್ಲಿ' - ಎಂದು ಕೇಳಿದರೆ—"ಮನಸ್ಸಿದ್ದಲ್ಲಿ ಹಾದಿ ಇದೆ"— ಅನ್ನುತ್ತಿದ್ದನು. ಮನಸ್ಸು ಬಲವಾಗಿದೆ. ಇನ್ನು ದಾರಿ ಕಾಣುವುದು ಮಾತ್ರ.

ರಜೆಯಲ್ಲಿ ಊರಿಗೆ ಬಂದನು. ಅವನ ತಂದೆಯವರ ಹೆಸರು ಬಾಲಕೃಷ್ಣರಾಯರೆಂದು. ಬಾಲಕೃಷ್ಣರಾಯರು ಪೂರ್ವದ ಮನುಷ್ಯರು. ಅವರ ಮರ್ಜಿ, ನಡತೆ, ಮಾತುಕಥೆಗಳೆಲ್ಲಾ ಹಳೆ ನಮೂನೆಯವು. ಅವರಿಗಿನ್ನು ಪೆನ್ಶನು ದೊರೆಯಲು ಎರಡು ವರುಷಗಳಿವೆ. ತಾಲೂಕು ಕಛೇರಿಯಲ್ಲಿ ಅವರು ಹೆಡ್‌ಗುಮಾಸ್ತಿಕೆ ನೋಡುತ್ತಿದ್ದಾರೆ. ಅದೊಂದು ಕಾಲದಲ್ಲಿ ಮನೆಯಲ್ಲಿ ನಾಲ್ಕು ಕುಂಟು ಪಂಕ್ತಿ ಇಂಗ್ಲಿಷನ್ನು ಓದಿಕೊಂಡು, ಅವರ ಕಾಲದ ತಹಶಿಲ್ದಾರರೊಬ್ಬರೊಡನೆ ಅಡುಗೆಗೆಂದು ಸೇರಿಕೊಂಡರು. ಮೆಲ್ಲಗೆ ಅವರ ಕೃಪೆಯನ್ನು ಗಳಿಸಿಕೊಂಡು ಒಂದು ಗುಮಾಸ್ತಿಕೆಯಾಯಿತು. ಈಗ, ಅಲ್ಲಿಂದ ಮೇಲಕ್ಕೆ, ಇನ್ನೂ ಮೇಲಕ್ಕೆ, ಕುಪ್ಪಳಿಸಿ ಹಾರಿ ಈ ಪದವಿಯನ್ನು ಗಳಿಸಿರುವರು. ಅವರ ಮನಸ್ಸಿನಲ್ಲಿ ಇದು ಇಂದ್ರಪದವಿಗೆ ಸಮ

ನೆಂದಿತ್ತು. ಹಾಸುಗೆಗಿಂತ ಉದ್ದಕ್ಕೆ ಕಾಲುಚಾಚುವ ಗುಣವು ಅವರದ್ದಲ್ಲ. ಹಾಗಿದ್ದರೆ ಅವರು ಸಂಸಾರ, ಮನೆಮಠ ಮಾಡಿಕೊಂಡಿರುವುದೇ ಅಸಾಧ್ಯವಿತ್ತು. ಕೈಯಲ್ಲಿ ನಗದಿಯಿಂದ ಒಂದು ಕಾಸಿಲ್ಲದಿದ್ದರೂ, ಮನೆತೋಟ, ಹೊಲಗಳೆಂದು ಮರ್ಯಾದೆಯಿಂದ ಕಾಲಕಳೆಯುವಷ್ಟು ಮಾಡಿರಿಸಿರುವರು. ಅವರ ಸಂಸಾರದಲ್ಲಿ, ತೊಡಕಿಲ್ಲದೆ ಸಾಗುವ ಮಡದಿ. ಮೂರು ಮಂದಿ ಮಕ್ಕಳು. ಎಲ್ಲರೂ ಗಂಡು ಹುಡುಗರೇ. ಹಿರಿಯವನು ನಮ್ಮ ಮುಕುಂದರಾಯ. ಎರಡನೆಯ ಹುಡುಗ ನಾಲ್ಕನೆಯ ಈಯತ್ತೆ(IV Form)ಯಲ್ಲಿ ಓದುತ್ತಿರುವನು. ಇನ್ನೊಬ್ಬನು ಚಿಕ್ಕಮರಿ. ಎರಡನೆಯ ತರಗತಿ. ಇವರಿಬ್ಬರ ಹೆಸರು ರಾಮ ಗಣೇಶರೆಂದು. ಬಾಲಕೃಷ್ಣರಾಯರ ಮನಸ್ಸಿನಲ್ಲಿ ಹೀಗಿತ್ತು: ಹಿರಿಯನಿಗೆ ಲಗ್ನಮಾಡಿಸಿ, ತನ್ನ ಆಫೀಸಿನಲ್ಲಿಯೇ ಸೇರಿಸಿಬಿಟ್ಟರೆ, ತಾನು ಪೆನ್ಶನುಪೊಂದಿ ಉದ್ಯೋಗವನ್ನು ತ್ಯಜಿಸುವ ಗಳಿಗೆಯಲ್ಲಿ ತನ್ನ ಸ್ಥಾನಕ್ಕೆ ತನ್ನ ಮರಿಯನ್ನು ಹೇಗಾದರೂ ಸೆಳೆಯಬಹುದು ಎಂದು ಅವನಿಗಿರುವ ವರ್ಚಸ್ಸು, ಆಫೀಸರ ಜನರಲ್ಲಿರುವ ಪರಿಚಯ, ಇಷ್ಟು ಕೆಲಸವನ್ನು ಮಾಡಿಸುತ್ತಲಿತ್ತು. ಇನ್ನು ಎರಡನೆಯ ಹುಡುಗನಿಗೆ, ಸಾಧ್ಯವಾದರೆ ಬಿ. ಎ. ತನಕ ಮಾಡಿಸಿಬಿಡುವುದು. ಮೂರನೆಯವನು ಮನೆ, ಆಸ್ತಿಗಳನ್ನು ನೋಡಿಕೊಳ್ಳುವುದಕ್ಕಾಯಿತು — ಎಂದು.

ಕೆಲವು ಮಟ್ಟಿಗೆ ಅವರ ಆಶೆಯು ಕೈಗೂಡುವ ಗಳಿಗೆಯು ಸಮೀಪಿಸಿದಂತೆಯೇ ಕಂಡಿತು. ತನ್ನ ಹಿರಿಮಗನಿಗೆ ಲಗ್ನಮಾಡಿಸಬೇಕೆಂಬ ಗಳಿಗೆಯಲ್ಲಿಯೇ, ತಮ್ಮದೇ ಊರಿನ ಪ್ರಮುಖ ವಕೀಲರಾದ ಶ್ರೀಪತಿರಾಯರು, ತಮ್ಮ ಮಗಳ ಲಗ್ನದ ವಿಚಾರ ಯೋಚಿಸಿದರು. ಬಾಲಕೃಷ್ಣರಾಯರಿಂದ ಅವರ ಮಗನ ಜಾತಕವನ್ನು ಗುಪ್ತವಾಗಿ ತರಿಸಿಕೊಂಡರು. ಸರಿಬಂದೇ ಬಂದಿತು. ಇನ್ನು ಮಾತುಕಥೆಯೊಂದೇ ಉಳಿದಿದೆ. ಶ್ರೀಪತಿರಾಯರು ಸ್ವತಃ ಅವರ ಮನೆಗೆ ಬಂದರು. ಉಪಹಾರವಾದ ನಂತರ — "ಅಹುದೋ, ಬಾಲಕೃಷ್ಣ, ನಿನ್ನ ಹುಡುಗನಿಗೆ ಈ ವರುಷ ಪರೀಕ್ಷೆಯಾಯಿತಲ್ಲ. ಮುಂದಿನ ಯೋಚನೆಯೇನು? ಅವನು ಊರಿಗೆ ಬರುವುದೆಂದು?" — ಎಂದು ಕೇಳಿದರು. ಆಗ ಪುತ್ತೂರಿನಲ್ಲಿ, ಅದೇ ರಾಯರಿಬ್ಬರೂ ಇರುವ ಊರು, ಹ್ಯಾ

ಸ್ಕೂಲು ಆಗಿರಲಿಲ್ಲವಂತೆ. ಹುಡುಗನು ವಿದ್ಯಾಭ್ಯಾಸಕ್ಕೆಂದು ಮಂಗಳೂರಿನಲ್ಲಿ ಇಳಿದುಕೊಂಡಿದ್ದನು. ಬಾಲಕೃಷ್ಣರಾಯರ ತಂಗಿಯ ಮನೆಯಲ್ಲೇ ಮುಕುಂದನಿದ್ದುದರಿಂದ ರಾಯರಿಗೂ ವೆಚ್ಚದ ಮಟ್ಟಿಗೆ ಸ್ವಲ್ಪ ಅನುಕೂಲವೇ ಆಯಿತು. ಈಗ ವಕೀಲರ ಪ್ರಶ್ನೆಯನ್ನು ಕೇಳಿ, ಹೆಡ್‌ಗುಮಾಸ್ತರು— "ಏನೋ ಸ್ವಾಮಿ, ಮುಂದಿನ ಯೋಚನೆ ಮಾಡಲಿಲ್ಲ. ತಮ್ಮಂಥವರ ಆಶೀರ್ವಾದದಿಂದ ಹೇಗಾಗುತ್ತದೋ ಆಗಲಿ"—ಎಂದರು. ಈ ಮಾತನ್ನಾಡುವಾಗ ರಾಯರ ಅಭಿಪ್ರಾಯ ಬೇರೆಯಾಗಿತ್ತು. ವಕೀಲರ ತಮ್ಮಂದಿರು ರೆವೆನ್ಯೂ ಬೋರ್ಡಿನಲ್ಲಿ ದೊಡ್ಡ ಹುದ್ದೆಯಲ್ಲಿದ್ದರು. ಅವರ ಮುಖಾಂತರ ಕೀಲಿ ತಿರುಗಿಸಿದರೆ, ಮಗನನ್ನು ತನ್ನ ಸ್ಥಾನದಲ್ಲಿ ಏರಿಸುವ ಕೆಲಸ ಕ್ಷಣಮಾತ್ರದಲ್ಲಿ ಆಗಬಹುದಲ್ಲ ಎಂದು ಅವರ ಯೋಚನೆ.

ಅಷ್ಟರಲ್ಲಿ ವಕೀಲರು—"ಹೌದೋ ಬಾಲಕೃಷ್ಣ, ನಿನ್ನ ಹುಡುಗನಿಗೆ ವಿವಾಹಮಾಡುವ ಮನಸ್ಸಿಲ್ಲವೇ?"—ಎಂದು ಕೇಳಿದರು. ನಮ್ಮ ರಾಯರು ಹಾಗೆ ಮನಸ್ಸಿನಲ್ಲಿದ್ದುದನ್ನು ಒಮ್ಮೆಗೇ ಬಾಯ್ಬಿಡುವವರಲ್ಲ. ಆದುದರಿಂದ— "ಇನ್ನೂ ಹುಡುಗ ಚಿಕ್ಕವ. ಅವಸರವೇನು?" ಎಂದರು. ಇತ್ತ ಶ್ರೀಪತಿರಾಯರಿಗೆ ಈ ವರುಷ ಹೇಗಾದರೂ ಮಾಡಿ, ಮಗಳಿಗೊಂದು ಲಗ್ನಮಾಡದೆ ಮಾರ್ಗವಿಲ್ಲ. ಹುಡುಗಿಯು ಅಷ್ಟೊಂದು ರೂಪವತಿಯಲ್ಲ. ವಯಸ್ಸು ೧೬ಕ್ಕೆ ಮಿಕ್ಕಿತು. ಇನ್ನು ತಡಮಾಡಿದರಾಗದು ಎಂದು ನಿರ್ಣಯಿಸಿದ್ದರು. ಈ ದಿನ ಅಲ್ಲಿಗೆ ಬಂದ ಉದ್ದೇಶವಾದರೂ ಬೇರೆಯಿರಲಿಲ್ಲ. ಆದುದರಿಂದ ಮುಂದೆ ಮಾತು ಬೆಳೆಯಿಸದೆ ಒಮ್ಮೆಗೆ "ಹೌದೋ, ನಮ್ಮ ಲೀಲಾವತಿಯನ್ನು ಕಂಡಿರುವೆಯಲ್ಲಾ"—ಎಂದರು. ಗುಮಾಸ್ತರು ಅರೆಮರೆವಿನೆಂದೆಂಬಂತೆ "ಯಾರ ಹುಡುಗಿ?"ಯೆನ್ನಲು ಅವರು ಪ್ರತ್ಯುತ್ತರವಾಗಿ—"ನನ್ನ ಚಿಕ್ಕ ಹುಡುಗಿ ಕಿರೇಯವಳು ದೈವಾನುಗ್ರಹವಾದರೆ ಏಕೆ ನಿನ್ನ ಮಗನಿಗೆ ಕೊಟ್ಟು ಸಂಬಂಧ ಬೆಳೆಯಿಸಬಾರದು?"—ಎಂದರು. ಹಿಂದುಮುಂದಿನ ಯೋಚನೆಮಾಡದೆ ಬಾಯಿತೆರೆಯಬಾರದೆಂದು ಗುಮಾಸ್ತರರು ಪ್ರಸ್ತಾಪವನ್ನು ಸ್ವಲ್ಪ ತಳ್ಳಲು ನಿಶ್ಚಯಿಸಿದರು. "ಯಾವುದಕ್ಕೂ ಹುಡುಗನನ್ನು ಕೇಳಿ ಆಗಬೇಕು"—ಎಂದರು. ಆ ದಿನದ ಮಟ್ಟಿಗೆ ಪ್ರಸ್ತಾಪ ಅಲ್ಲಿಗೇ ನಿಂತಿತು.

ಶ್ರೀಪತಿರಾಯರು, ಮಗನ ಕೀಲಿಯನ್ನೆ ತಿರುಗಿಸಬೇಕೆಂದು ಯೋಚಿಸಿದರು. ಬಾಲಕೃಷ್ಣರಾಯರು—"ಲಗ್ನಮಾಡುವುದು ನಿಶ್ಚಯ. ಆದರೆ ವರದಕ್ಷಿಣೆಯೆಷ್ಟನ್ನು ಕೇಳಲಿ" ಎಂದು ಯೋಚಿಸತೊಡಗಿದರು.

ಒಂದು ವಾರದೊಳಗಾಗಿ ಮುಕುಂದನ ಸವಾರಿ ಊರಿಗೆ ಬಂದಿತು. ಬಂದ ಒಂದೆರಡು ದಿವಸದೊಳಗಾಗಿ ಮುಕುಂದನ ಮನಸ್ಸಿನ ಮುಂಡಿಗೆಯೇನೆಂದು ತಿಳಿಯಿತು. ಗುಮಾಸ್ತರ ಒಬ್ಬ ಗೆಳೆಯರು—"ಏನು ಸ್ವಾಮಿ, ಹುಡುಗನಿಗೆ ಐ. ಸಿ. ಎಸ್. ವರೆಗೆ ಮಾಡುವ ನಿಶ್ಚಯ ಮಾಡಿದ್ದೀರಂತೆ. ನಿಶ್ಚಯವೇ?" ಎಂದು ಕೇಳಿದರು. ರಾಯರು "ಎಲ್ಲಿ ಹುಚ್ಚು ಸ್ವಾಮಿ?"—ಎಂದು ನಕ್ಕರು. ಅದೆಲ್ಲೋ ಚೇಷ್ಟೆಯೆಂದು ಅವರು ತಿಳಿದಿದ್ದರು. ಆದರೆ ಮನೆಗೆ ಬಂದಾಗ ತಾಯಿಯ ಮೂಲಕ, ಮುಕುಂದನು ತನ್ನ ಆಸೆಯು ಅದೇ ಎಂದು ಸೂಚಿಸಿದನು. ರಾಯರಿಗೆ ಎದೆ ಜಗ್ ಎಂದಿತು. ಅವರ—ಯಾವತ್ತು ಸಂಪತ್ತು ಮಾರಿದರೆ ಅದು ಸಾಧ್ಯವೋ ಅಸಾಧ್ಯವೋ ಎಂಬುದು ಅವರಿಗೆ ತಿಳಿಯಲಿಲ್ಲ. ಹುಡುಗನಿಗೆ ಭ್ರಮೆಯೆಂದರು. ಇತ್ತ, ಮಗನ ಮದುವೆಗಾಗಿ ತಾಯಿ ಹಂಬಲಪಡತೊಡಗಿದಳು. ಹಂಬಲದೊಂದಿಗೆ ಹಪ್ಪಳ, ಸಂಡಿಗೆ, ಚಕ್ಕುಲಿ, ಉಂಡೆ ಉರುಟುಗಳೆಲ್ಲಾ ಆಗತೊಡಗಿದುವು. ಒಂದು ದಿನ ತಾಯಿಯ ಆಸೆಯೂ ಅವನ ಕಿವಿಗೆ ಮುಟ್ಟಿತು. ತಂದೆಯು ಆ ಆಸೆಯ ಪೂರೈಕೆಗಾಗಿ ಒಳ್ಳೆ ನೆಂಟಸ್ತಿಕೆಯನ್ನು ಹುಡುಕತೊಡಗಿದನು. ಶ್ರೀಪತಿರಾಯರ ತಂಟೆಗೆ ಹೋಗಲಿಲ್ಲ. ತಾವಾಗಿ ಹೋದರೆ ಧಾರಣೆ ತಗ್ಗೀತೆಂದೂ, ಅವರಾಗಿ ಬರಬಹುದೆಂದೂ ಎಣಿಸಿದರು.

ಮುಕುಂದನಲ್ಲಿಯೇ ಅವನ ತಂದೆಯು ಒಂದೆರಡು ಸಂಬಂಧಗಳ ವಿಚಾರ ನುಡಿದನು. ಮುಕುಂದನ ಮುಖ ಸಪ್ಪಗಾಯಿತು. ತನಗೆ ಶಿಕ್ಷಣ ಕೊಡಿಸಿರಿ ಎಂದು ಕೇಳಿದುದಕ್ಕೆ, ಲಗ್ನಮಾಡಿಸಿರಿ—ಎಂದಂತೆ ವರ್ತಿಸುತ್ತಾರಾಗಿ ಕಂಡಿತು. ಅವನೂ ಹಟಮಾರಿಯಾಗಿ ಕುಳಿತುಬಿಟ್ಟನು.

ಒಂದು ದಿನ ಸಂಜೆ ಹಾದಿಯಲ್ಲಿ ಅಲೆಯುತ್ತಿರುವಾಗ ಶ್ರೀಪತಿರಾಯರ ಭೇಟಯಾಯಿತು. ಶ್ರೀಪತಿರಾಯರು ತಾನಾಗಿಯೇ ಅವನನ್ನು ಮಾತನಾಡಿಸಿದರು. ಅಷ್ಟಕ್ಕೇ ಬಿಡಲಿಲ್ಲ. ಮನೆಯ ವರೆಗೂ ಒಯ್ದು ಉಪ

ಚರಿಸಿದರು. ದೊಡ್ಡವರ ಮನೆಯಲ್ಲಿ ಅವನು ದೊಡ್ಡಿಸ್ಥನದಿಂದ ಕುಳಿತು ಮಾತನಾಡಿದುದು ಅದೇ ಮೊದಲು. ಸಂಜೆಯಾಗುತ್ತ ಬಂದುದನ್ನು ಕಂಡು "ವೇಳೆಯಾಯಿತು, ಹೋಗುತ್ತೇನೆ"— ಎಂದನು. ಆದರೆ ರಾಯರು ಬಿಡಬೇಕೆ?

ಉಪಹಾರಕ್ಕೆಂದು ತಟ್ಟೆಗಳು ಮೇಜಿನ ಮೇಲೆ ಬಂದುವು. ತಿಂಡಿ ತಿನಿಸುಗಳ ಗಮಗಮವು ಸೂಸಿತು. ಸಂಕೋಚವಿಲ್ಲದೆ ಫಲಾಹಾರವನ್ನು ಒಳಕ್ಕೆ ಸಾಗಿಸಿದನು. ವಕೀಲರು–"ಲೀಲಾ, ಕಾಫಿ ತರಬಾರದೇ?"–ಎಂದರು. ಲೀಲೆಯು ಥಳಕಿನಿಂದ ಬಂದು ಕಾಫಿ ತಂದಿರಿಸಿದಳು. ಏಕೋ ಅವಳಿಗೆ ನಾಚುಗೆಯಾಯಿತು ರಾಯರು ಮಾತನಾಡುವ ನೆಪದಿಂದ ಅವಳನ್ನು ನಿಲ್ಲಿಸಿಕೊಳ್ಳುವ ಯತ್ನಮಾಡಿದರೂ ಅದು ನಿರರ್ಥಕವಾಯಿತು. "ಇವಳು ನನ್ನ ಕಿರಿ ಮಗಳು ಲೀಲೆ" ಎಂದು ರಾಯರು ಪರಿಚಯದ ಪೀಠಿಕೆಯನ್ನು ಮಾಡಿಕೊಟ್ಟರು. ಮುಕುಂದನ ಗಮನ ಪರಿಚಯದ ಕಡೆಗೆ ಹೋಗಲಿಲ್ಲ. ಲಡ್ಡುಗೆಗಳ ಮೇಲೆ ನೆಲಸಿತ್ತು. ರಾಯರು ತಿರುಗಿ ಒಂದು ಸಂಭಾಷಣೆಯ ಸೆರಗನ್ನು ಬಿಚ್ಚಿದರು.

"ಹೌದೋ, ಮುಕುಂದ . . . ."

"ಏನು?"

"ಏನಿಲ್ಲ -- ನಿನ್ನ ಮೆಟ್ರಿಕ್ಯು ಪರೀಕ್ಷೆ ಕಳೆಯಿತೆಂದು ಕಾಣುತ್ತದೆ."

"ಅಹುದು, ಮುಗಿದು ಒಂದು ವಾರವಾಯಿತು."

"ಇನ್ನು ಮುಂದಿನ ಯೋಚನೆಯೇನು?"

"ತಂದೆಯವರನ್ನು ಕೇಳಬೇಕು."

"ತಂದೆಯವರ ಇಚ್ಛೆ ಇದ್ದೇ ಇದೆಯಲ್ಲ. ನಿನಗೊಂದು ಗುಮಾಸ್ತೆ ಕೊಡಿಸುವ ಯೋಚನೆ ಅವರದು."

"ನಾನೂ ಕೇಳಿದೆ."

"ಆದರೆ ನಿನ್ನ ಯೋಚನೆ?"

"ನನ್ನ ಜನ್ಮಕ್ಕೆ ಗುಮಾಸ್ತನಾಗಲಾರೆ . . . ."

"ಮತ್ತೇನು ಮಾಡುವ ಮನಸ್ಸು . . . ?"

"ನನಗೆ ಐ. ಸಿ. ಯುಸ್. ಆಗುವ ಆಸೆಯಿದೆ!"

"ಐ. ಸಿ. ಯುಸ್. ಯೋಚನೆ ಸರಿಯೇ. ಆದರೆ ಹಣದ ರಾಶಿಯೇ ಬೇಕು. ತಂದೆಯುವರು ಕೊಡುವರೇ?"

"ತಂದೆಯುವರೇ! ಅವರು ಮಾತನಾಡುವುದೇ ಇಲ್ಲ—"

"ಹಾಗಿದ್ದಲ್ಲಿ . . . ?"

"ಏನಾದರೂ ಮಾಡಬೇಕು"

"ಏನಾದರೂ . . . . . ಅಂದರೆ?"

"ಏನಾದರೂ . . . . ನಾನು ಇನ್ನೂ ಯೋಚಿಸಿಲ್ಲ."

"ನಿನಗೆ ಖಂಡಿತ ಮುಂದರಿಸುವ ಯೋಚನೆಯಿದೆಯೇ?"

"ಅದರಲ್ಲಿ ಸಂಶಯವೇಕೆ?"

"ಹಾಗಿದ್ದರೆ, ನಾನೊಬ್ಬರಿಂದ ಸಹಾಯವನ್ನು ಕೊಡಿಸುವೆನು. ನೀನು ಮಾತ್ರ ಅವರ ಒಂದು ಬಯಕೆಯನ್ನು ಪೂರೈಸಬೇಕು."

"ನಿಜವೇ? ನನ್ನಿಂದಾದರೆ ಮಾಡುವೆ."

"ನಿಶ್ಚಯವೇ?"

"ನಿಶ್ಚಯ. ಆದರೆ ಅವರು ಯಾರು?"

"ಈಗ ನಾನೇ ಎಂದು ತಿಳಿ."

"ನನ್ನಿಂದಾಗಬೇಕಾದ ಕೆಲಸ . . . . ?"

"ಅದೇನು ವಿಶೇಷವಲ್ಲ. ನಿನಗೆ ಬೇಕಾದುದೆ ಅವರಿಗೆ ಬೇಕಾದುದು."

"ಆದರೂ ಏನೆಂದು ಹೇಳಬಹುದಲ್ಲ? . . . ."

"ನೀನು ನಮ್ಮ ಲೀಲೆಯನ್ನು ಕಂಡೆಯಷ್ಟೆ."

"ಅಂದರೆ . . . . ?"

"ಈ ಕಾಫಿ ತಂದ ಹುಡುಗಿ."

ರಾಯರು ತಿರುಗಿ "ಲೀಲಾ" ಎಂದು ಕರೆದರು. ಲೀಲೆ ಅವಸರದಿಂದ ಬಂದಳು. ಮುಕುಂದನಿಗೂ ಬಾಲಕಿಯ ದರ್ಶನವಾಯಿತು. ಇಡೀ ಸಂಭಾಷಣೆಯ ಅರ್ಥ ನೀರಿನಷ್ಟು ಸ್ಪಷ್ಟವಾಯಿತು. ಮಾತನ್ನೇ ಆಡಲಿಲ್ಲ.

ರಾಯರು ಪ್ರತ್ಯುತ್ತರಕ್ಕಾಗಿ ಅಲ್ಲೇ ನಿರ್ಬಂಧಪಡಿಸಲಿಲ್ಲ. ಅಂದು ಮುಕುಂದನು ಯೋಚನಾಮಗ್ನನಾಗಿ ಮನೆಗೆ ಹೋದನು.

ಮರುದಿನ ಶ್ರೀಪತಿರಾಯರು, ಮುಕುಂದನಿಲ್ಲದ ಗಳಿಗೆಯನ್ನು ಕಂಡು ಬಾಲಕೃಷ್ಣರಾಯರ ಮನೆಗೆ ಹೋಗಿದ್ದರು. "ಲಗ್ನವಾಗುವುದಾದರೆ, ಹುಡುಗನ ಮುಂದಿನ ವಿದ್ಯಾಭ್ಯಾಸದ ಹೊಣೆ ತನ್ನದೆ"ಂದು ವಚನವಿತ್ತರು. ಮಗನಿಗೆ "ಐ.ಸಿ.ಯಸ್." ಆಗುವಷ್ಟು ಅನುಕೂಲತೆಯಾದರೆ ಅದು ರಾಯರಿಗೆ ಎಂದಿಗೂ ಕಹಿಯಾಗುತ್ತಿರಲಿಲ್ಲ. ಅವರು ಬರೇ ವರದಕ್ಷಿಣೆ ಬೇಡುವುದಾಗಿದ್ದರೆ, ೧೦೦೦ವನ್ನು ಹೆದರಿಹೆದರಿ ಕೇಳುತ್ತಿದ್ದರೋ ಏನೋ. ಮೆಟ್ರಿಕ್ಕು ಕಲಿತ ಹುಡುಗನಿಗೆ ಅದಕ್ಕೂ ಹೆಚ್ಚು ಸಿಗುತ್ತಿದ್ದಿಲ್ಲವೆಂದು ಅವರಿಗೂ ತಿಳಿದಿತ್ತು. ಈಗ ಅದಕ್ಕೂ ಹೆಚ್ಚಿನ ಲಾಭವಾಗುವುದಾದರೆ ಬೇಡವೆನ್ನುವರೇ? ಒಪ್ಪಿಗೆಯಿತ್ತರು. ಶ್ರೀಪತಿರಾಯರು ಹರ್ಷಚಿತ್ತರಾಗಿ ಮನೆಗೆ ಬಂದರು.

ಆ ರಾತ್ರಿ, ತಂದೆ ಮಗನನ್ನು ಕುಳ್ಳಿರಿಸಿಕೊಂಡು ಲಗ್ನದ ವಿಚಾರ ಹೇಳಿದರು—"ಇತ್ತ, ನಮ್ಮ ಆಸೆಯೂ ತೀರಿತು, ನಿನ್ನ ಆಸೆಯೂ ತೀರಿತು"–ಎಂದರು ಮುಕುಂದ ಮಾತನಾಡಲಿಲ್ಲ. ತಿರಸ್ಕರಿಸುವಷ್ಟು ಧೈರ್ಯ ಅವನಿಗಿರಲಿಲ್ಲ. ಇನ್ನೊಂದು ಲಗ್ನವಾಗಿದ್ದರೂ, ತಂದೆ ಕಣ್ಣು ಕೆಂಪುಮಾಡಿ ಹೇಳಿದಲ್ಲಿ ಸಮ್ಮತಿಸುತ್ತಿದ್ದನು. ಈಗ ತನ್ನೊಂದು ಆಸೆಯು ಫಲಿಸುವುದಾದರೆ . . . .? ಎಂದು ಯೋಚಿಸಿದನು. ಮೊದಲು "ಮನಸ್ಸಿದ್ದಲ್ಲಿ ಹಾದಿ ಇದೆ" ಎಂದು ನಿರ್ಧರಿಸಿದ್ದನು. ಈಗ ಇದೇ ಆ ಹಾದಿಯೆಂದೂ ಒಪ್ಪಿದನು.

ಹದಿನೈದು ದಿನಗಳಲ್ಲಿ ವಿವಾಹವೂ ಮುಗಿಯಿತು. ತನ್ನ ತಂತ್ರವೇ ತಂತ್ರವೆಂದು ಬಾಲಕನು ತಿಳಿದನು. ವ್ಯಾಸಂಗವನ್ನು ಮುಂದರಿಸುವ ಸಿದ್ಧತೆಗಳಾದುವು. ರಜೆಮುಗಿಯಲು ತನ್ನ ಸಮವಯಸ್ಕ ಪತ್ನಿಯನ್ನು ಬೀಳ್ಕೊಟ್ಟು ಮದ್ರಾಸಿಗೆ ತೆರಳಿದನು. ಶ್ರೀಪತಿರಾಯರ ತಮ್ಮನ ಮನೆಯಲ್ಲಿ ನಿವಾಸ; ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಶಿಕ್ಷಣ. ಆರು ತಿಂಗಳ ಕಾಲ ಸಂದಿತು. ಕ್ರಿಸ್ಮಸ್ ರಜೆಗೆ ಬರಲೇ ಬೇಕೆಂದು ಮಾವನ ಆಗ್ರಹದ ಪತ್ರವೂ ಬಂದಿತು. ಬಂದನು. ನವಪತ್ನಿಯ ಗೆಳೆತನದಲ್ಲಿ ಕೆಲವು ದಿನಗಳನ್ನು ಕಳೆದನು. ಮರಳುವಾಗ, ದಂಪತಿಗಳಿಬ್ಬರು ಕೂಡಿಯೇ ಮದ್ರಾಸಿಗೆ ತೆರಳಿದರು.

ಮದುವೆಯಾಗಿ ಎರಡು ವರುಷಗಳಾದುವು. ಮುಕುಂದನು ಇಂಟರ್ ಪರೀಕ್ಷೆಯ ಫಲನಿರೀಕ್ಷಣೆಯಲ್ಲಿದ್ದನು. ಶ್ರೀಪತಿರಾಯರ ಮನೆಯಲ್ಲಿ ಚಕ್ಕಂದಹೊಡೆಯುತ್ತ ಕಾಲಕಳೆಯುವುದು; ದಿನನಿತ್ಯ ಪರೀಕ್ಷಾಫಲ ನಿರೀಕ್ಷಣೆಗಾಗಿ ವರ್ತಮಾನ ಪತ್ರ ನಿರೀಕ್ಷಣೆಮಾಡುತ್ತಿರುವುದು. ಒಂದು ದಿನ ಬಂದೇ ಬಂದಿತು. ಆದರೆ ಮುಕುಂದನ ಸಂಖ್ಯೆ ಅದರಲ್ಲಿ ಕಾಣಿಸಲಿಲ್ಲ. ಮುಕುಂದನ ಮುಖ ತಗ್ಗಿತು. ಶ್ರೀಪತಿರಾಯರು ಬಂದು — "ಈ ಪರೀಕ್ಷೆಯಲ್ಲದಿದ್ದರೆ ಇನ್ನೊಂದು ಪರೀಕ್ಷೆಯಿಲ್ಲವೇ?" ಎಂದು ಸಮಾಧಾನಪಡಿಸಿದರು ಹೀಗೆ ಐದು ಇನ್ನೊಂದು ಪರೀಕ್ಷೆಗಳಾಗಿ, ಕೊನೆಗೆ ಮಂಗಳೂರಿನಲ್ಲಿಯೇ ಬಿ. ಎ ತರಗತಿಗೆ ಸೇರಿಕೊಂಡನು. ಎರಡು ವರುಷಗಳಲ್ಲಿ ಬಿ. ಎ. ಪರೀಕ್ಷೆ ಬಂದಿತು. ಆದರೆ ಅದೂ ಅವನ ಆಸೆಗೆ ಪ್ರತಿಕೂಲವಾಯಿತು.

ಅದೊಂದು ದಿನ ವಿಲಾಯತಿಯೆಂಬುದು ಅವನಿಂದ ಬರೇ ಒಂದು ದಿನದ ಹಾದಿಯಲ್ಲಿತ್ತು. ಈಗ ಅಲ್ಲಿಗೆ ಒಂದು ಯುಗ ಕಾಲವೇ ನಡೆದರೂ ಅದು ಸಿಗುವಂತಿರಲಿಲ್ಲ. ಆದರೂ ಮುಕುಂದನ ಆಸೆ ಬಿಡಲಿಲ್ಲ. ಸುಮ್ಮನಾದರೂ ಒಮ್ಮೆ ವಿಲಾಯತಿಯನ್ನು ಕಂಡುಬರಬೇಕೆಂದಿದೆ. ಶ್ರೀಪತಿರಾಯರು ಏನು ಮಾಡುವರೋ? ಎರಡು ಮಕ್ಕಳ ತಾಯಿಯಾದ ಲೀಲಾವತಿಯು ಏನು ಮಾಡುವಳೋ ತಿಳಿಯದು.

## ೫. ಸತ್ಯ ಸೋಮಪ್ಪನ ಸಾಹಸಗಳು.

ನಮ್ಮ ಸಾಲೆಯಲ್ಲಿ ಸೋಮಪ್ಪನ ಹೆಸರೆಂದರೆ ಹುಡುಗರಿಗೆ ಬಾಯಿ ಪಾಠ. ಈಗೀಗ ಎರಡು ಮೂರು ಸೋಮಪ್ಪರು ಬಂದುದರಿಂದ ನಮ್ಮ ಸೋಮಪ್ಪನನ್ನು ಗುರುತಿಸುವ ಸಲುವಾಗಿ ಸತ್ಯ ಸೋಮಪ್ಪನೆಂದು ಕರೆಯುತ್ತಿರುವೆವು. ಇದು ನಮ್ಮ ಸೋಮಪ್ಪನ ಸತ್ಯಕ್ಕೆ ಮೆಚ್ಚಿ, ನಮ್ಮ ಕನ್ನಡ ಪಂಡಿತರು ಕೊಟ್ಟ ಹೆಸರು. ಹಿಂದಿನ ಕಾಲದಲ್ಲಿ ಸತ್ಯ ಹರಿಶ್ಚಂದ್ರನಿದ್ದಂತೆ ಈಗಿನ ಕಾಲಕ್ಕೆ ಸತ್ಯ ಸೋಮಪ್ಪನೆಂದು ಅವರು ಹೇಳುವುದುಂಟು. ಅಂತು ಏನಾದರೂ ಸಂಕಷ್ಟ ನಿವಾರಣೆಯಾಗಬೇಕಾದರೆ ನಾವು ಇನ್ನಾರ ಹತ್ತಿರವೂ ಯೋಚನೆಗೆ ಹೋದರೆ ಪ್ರಯೋಜನವಿಲ್ಲ. ಸತ್ಯ ಸೋಮಪ್ಪನೇ ಗತಿ. ಸೋಮಪ್ಪನ ಮಿದುಳೆಂದರೆ ಅದ್ಭುತ! ಅವನ ಚಮತ್ಕಾರವನ್ನು ಕಂಡರೆ, ಅವನು ಮಿದುಳಿನಿಂದ ಯೋಚಿಸುವುದಕ್ಕೂ ಮಿಗಿಲು ಕರುಳಿನಿಂದಲೇ ಯೋಚಿಸುವನೆಂದು ನಮಗೆ ಕಾಣುತ್ತಿತ್ತು. ಅಂಥ ಗೂಢಾಲೋಚನೆ ಅವನದು. ಅವನ ನಾಲಿಗೆಯಾದರೂ ಅಷ್ಟು ಹರಿತವಿತ್ತು—ಮಸೆದ ಕ್ಷೌರ ಕತ್ತಿಯಂತೆ—ಅನ್ನುವರಲ್ಲ ಹಾಗೆ! ಆ ನಾಲಿಗೆಯ ಬುಡವು ಮಿದುಳಿಗೇ ಅಂಟಿಕೊಂಡಿರಬೇಕೆಂದು ನಮ್ಮಲ್ಲಿ ಹಲವರ ಊಹೆ. ನಮ್ಮ ಶರೀರಶಾಸ್ತ್ರವು ಹಾಗೆಲ್ಲ ಆಗಲು ಸಾಧ್ಯವಿಲ್ಲೆಂದು ಹೇಳಿದರೂ, ನಮ್ಮ ಮನಸ್ಸಿಗೇನೋ ಅದೇ ನಿಜವೆಂದು ಕಾಣುತ್ತಿತ್ತು. ನಮ್ಮೊಗೆಳೆಯನ ಚರಿತ್ರೆಯನ್ನು ಕೇಳಲು ಯಾರಿಗೂ ಕುತೂಹಲವಾಗಬಹುದು.

ಸೋಮಪ್ಪನ ಊರು ಶಿರಾಡಿ ಘಟ್ಟದ ಬಳಿಯಿರುವ ಒಂದು ಹಳ್ಳಿ. ಅವನ ಮನೆಯವರು ಊರ ಪಠೇಲರು. ಅವನು ಪಠೇಲರ ಹಿರಿ ಹುಡುಗ. ತೀರ ಕಾಡುಪ್ರದೇಶವಾದುದರಿಂದ ಆ ಊರಲ್ಲಿ ಪಾಠಶಾಲೆಗಳಾವುವೂ ಇದ್ದಿರಲಿಲ್ಲ. ಹೀಗಾಗಿ ಶಿವಾಜಿಯ ಹಾಗೆ ಸ್ವತಂತ್ರ ವಾತಾವರಣದಲ್ಲಿ ಅವನು ತನ್ನ ಶೈಶವ ಬಾಲ್ಯಗಳನ್ನು ಕಳೆದುಬಂದನು. ಶಿವಾಜಿಗೆ ಬೋಧಿಸಿದಂತೆ ರಾಮಾಯಣ ಮಹಾಭಾರತಗಳನ್ನು ಹೇಳುವ ತಾಯಿಯು ಅವನಿ

ಗಿಲ್ಲದಿದ್ದರೂ, ಬತ್ತೀಸಪುತ್ಥಳಿ ಕಥೆಗಳನ್ನು ಹೇಳುವ ಗೆಳೆಯರಿಗೆ ಕಡಿಮೆ ಯಿದ್ದಿರಲಿಲ್ಲ. ಸೋಮಪ್ಪನ ಶಿಕ್ಷಣವೆಲ್ಲ ಸ್ವಸಂಗ್ರುಹಿತವೆಂದರೂ ಚಿಂತೆಯಿಲ್ಲ. ಬೆಳಗ್ಗೆ ಎದ್ದು ಮನೆಯಿಂದ ಹೊರಟನೆಂದರೆ ಸಂಜೆಯಾಗುವಾಗ ಮನೆಗೆ ಬಂದರೂ ಬಂದನೇ. ತಂದೆಯು ಮನೆಯಲ್ಲಿಲ್ಲದಿದ್ದರೆ, ಮರುದಿನ ಬಂದರೂ ಬಂದನೇ. ಅವನ ಜತೆಗೆ ಅವನ ವಯಸ್ಸಿನ ನಾಲ್ಕಾರು ಹುಡುಗರು ಒಂದು ದಿನ ಕವೆಣೆಯನ್ನು ಹಿಡಿದುಕೊಂಡು ಅಳಿಲುಗಳ ಶಿಕಾರಿಗೆ ಹೊರಟರು, ಇನ್ನೊಂದು ದಿನ ಬೆಳ್ಳಕ್ಕಿ(ಕೊಕ್ಕರೆ)ಗಳ ಶಿಕಾರಿಗೆ ಹೊರಟರು. ಏನಿಲ್ಲ ದಿದ್ದರೆ ಉಟ್ಟ ಬಟ್ಟೆಯನ್ನು ಬಿಡಿಸಿ ನದಿಯಲ್ಲಿಳಿದು ಮೀನನ್ನು ಹಿಡಿದರೂ ಹಿಡಿದರು. ಮಧ್ಯಾಹ್ನ ಆಗುವುದರಲ್ಲಿ ಅವರ ವನಜೀವನಕ್ಕೆ ಅನುಕೂಲ ವಾದ ಆಹಾರಸಾಮಗ್ರಿಗಳು ಸಂಗ್ರುಹಿತವಾಗುತ್ತಿದ್ದುವು. ಸಂಜೆಯಾಗು ವುದರೊಳಗೆ ಅವನ್ನು ತಿಂದು ಜೀರ್ಣವೂ ಆಗುತ್ತಿತ್ತು. ಮಧ್ಯಾಹ್ನಕಾಲ ಅವರ ಕೆಲಸ—ಆಟವೊಂದೇ. ಗುಡ್ಡೆಯಿಂದ ಗುಡ್ಡೆಗೆ, ಹಳ್ಳದಿಂದ ಹಳ್ಳಕ್ಕೆ ಹಾರುವುದು. ಎಷ್ಟೋ ಬಾರಿ, ನದಿದಂಡೆಯ ಬಳಿ ಕುಳಿತಾಗ, ಶಿರಾಡಿ ಘಟ್ಟದ ಬಳಿಯ ಉನ್ನತ ಶಿಖರವೊಂದನ್ನು ಕಂಡು, ಕಾಲುಗಳನ್ನು ನದಿಯ ನೀರಿನಲ್ಲಿ ಅಲುಗಾಡಿಸುತ್ತ—“ಅಲ್ಲಿಂದ ಇಲ್ಲಿಗೆ ಏಕೆ ಹಾರಬಾರದು” ಎಂದು ಅವನು ಅಂದುಕೊಂಡುದೂ ಉಂಟು. ಇನ್ನು ಹಣ್ಣುಹಂಪಲುಗಳ ಕಾಲ ಬಂದಿತೆಂದರೆ ಸೋಮಪ್ಪನ ವಾನರಸೇನೆಗೂ, ಶ್ರೀರಾಮನ ವಾನರ ಸೇನೆಗೂ ಸ್ಪರ್ಧೆಯೇ ಹಾಗೆ ಸಂಜೆ ಮನೆಗೆ ಬರುವನು. ಬಂದಾಗ ಎಲ್ಲಾದರೂ ತಂದೆಯ ಮೂಗಿಗೆ ಹಲಸಿನ ಹಣ್ಣಿನ ಪರಿಮಳಹೊಡೆದು “ಸೋಮು, ಹಲಸಿನ ಹಣ್ಣು ತಿಂದು ಬಂದೆಯೋ? ಜ್ವರಹಿಡಿದು ಸಾಯುತ್ತಿ ನೋಡು”—ಎಂದರೆ—“ಇಲ್ಲ, ನೆರಮನೆಗೆ ಹೋಗಿದ್ದೆ. ಅವರ ಮಗು, ಒಂದು ತುಂಡನ್ನು ಹಿಡಿದುಕೊಂಡಿತ್ತು. ಅದನ್ನು ಎಬ್ಬಿಸಿ ತೊಳೆಗಳನ್ನು ಆ ಮಗುವಿಗೆ ತಿನ್ನಲು ಕೊಟ್ಟು ಬಂದೆನಿಷ್ಟೆ”— ಎಂದು ಉತ್ತರಿಸಿಬಿಡುವನು. ನಿತ್ಯವೂ ಹೀಗೆನ್ನಲು ಉಪಾಯವಿಲ್ಲದನ್ನು ಕಂಡು, ಮನೆಯಿಂದ ಹೊರಬೀಳು ವಾಗಲೇ ಒಂದು ನೀರುಳ್ಳಿ ಹಿಡಿದುಕೊಂಡು ಹೋಗುವನು. ಬರುವಾಗ ಹಲಸಿನ ಹಣ್ಣಿನ ಮೇಲೆ ಅದನ್ನಿರಿಸುವನು. ನೀರುಳ್ಳಿಯ ಸುವಾಸನೆಯು

ಹಲಸಿನ ಹಣ್ಣಿನ ದುರ್ನಾತವನ್ನು ನುಂಗಿಬಿಡುವುದು. ಹೀಗೆ ನಿತ್ಯವೂ ಒಂದಲ್ಲ ಒಂದು ಶೋಧೆ ಸೋಮಪ್ಪನದಾಗುತ್ತಿತ್ತು.

ಈಗ ಸೋಮಪ್ಪನಿಗೆ ಒಂಭತ್ತು ವರುಷ ಎನ್ನುವಾಗ ಅವನ ಊರಿಗೊಂದು ಆಪತ್ತು ಬಂದಿತು. ನೆಟ್ಟಗೆ ಅವನ ಊರಿನಲ್ಲೇ ಬೋರ್ಡಿನವರು ಒಂದು ಶಾಲೆಯನ್ನು ತಂದು ನಟ್ಟರು. ಪಟೇಲರು ಖಾವಂದರ ಸಂತೋಷಕ್ಕಾಗಿ, ತಮ್ಮ ಒಕ್ಕಲು ಮನೆಯೊಂದನ್ನು ಖಾಲಿಮಾಡಿಸಿ, ಶಾಲಾಮಂದಿರ ಮಾಡಿಕೊಟ್ಟರು. ಉಪ್ಪಿನಂಗಡಿಯಿಂದ ವಾಮನ ಪೈಗಳೆಂಬ ಮಾಸ್ತರರು ನಾಲ್ಕು ಪುಸ್ತಕ, ಎಂಟು ಚೋಕ್, ಹನ್ನೆರಡು ಬೆತ್ತ—ಇಷ್ಟನ್ನು ಹಿಡಿದು ಕೊಂಡುಬಂದು ಮುಹೂರ್ತಮಾಡಿದರು. ಶಿರಾಡಿ ಘಟ್ಟದಲ್ಲಿ ಬೆತ್ತದ ಬೀಳಲೇ ಬೆಳೆಯುತ್ತದೆ ಎಂದು ಅವರಿಗೆಲ್ಲಿ ಗೊತ್ತು!

ಇನ್ನು ಶಾಲೆತೆರೆಯಬೇಕಲ್ಲ. ಹುಡುಗರನ್ನು ಜಮಾಯಿಸಬೇಕು. ಎಲ್ಲಿಂದ ತರಲಿ? ಪಟೇಲರನ್ನು ಕೇಳಿದರು. ಅವರು "ಅದು ನಿಮ್ಮ ಕೆಲಸ. ನೀವು ಊರಿನಲ್ಲಿ ನಾಲ್ಕು ಮನೆ ತಿರುಗಿಕೊಂಡು ಬನ್ನಿ. ಪರವೂರಿನವರ ಮಾತಿಗೆ ಸ್ವಲ್ಪ "ಭರಾಮ್" ಇದೆ. ಅವರಿಗೆ ಹೇಳಿ: ವಿದ್ಯೆಕಲಿತರೆಷ್ಟು ಲಾಭವಿದೆಯೆಂದು" ಎಂದು ಬೋಧಿಸಿದರು. ಪೈಗಳಿಗೆ ಅಷ್ಟುಮಾಡದೆ ನಿರ್ವಾಹವಿಲ್ಲ. ಕಾರಣ ಅವರಿಗೆ ಹೊಸತಾಗಿ ಮಾಸ್ತರಿಕೆ ಸಿಕ್ಕಿದುದು. ಈ ಶಾಲೆಯನ್ನು ಹುಟ್ಟಿಸಿ ಬದುಕಿಸಿ ಬಂದರೆ, ಅದು ಕಾಯಂ ಆಗಿ ಮುಂದೆ ಉಪ್ಪಿನಂಗಡಿಯಲ್ಲೇ ತಮಗೆ ಕೆಲಸ ಕಾಯಂ ಆದರೂ ಆಗಬಹುದು. ಅದಕ್ಕಾಗಿ ಅವರು ಪಟೇಲರ ಹುಡುಗನನ್ನು, ನಮ್ಮ ಸೋಮಪ್ಪನನ್ನು ಕಳೆದುಕೊಂಡು ಊರಮನೆಯೆಲ್ಲಾ ತಿರುಗಿದರು. ಯಾರೊಬ್ಬರಿಗೂ ತಮ್ಮ ಮಕ್ಕಳನ್ನು ಶಾಲೆಗೆಹಾಕಿ ಕೆಡಿಸಲು ಮನವಾಗಲಿಲ್ಲ. ಪೈ ಮಾಸ್ತರರು ವಿದ್ಯೆಯನ್ನು ಕುರಿತು ಘನದೀರ್ಘ ಉಪನ್ಯಾಸಮಾಡಿದರು. ಆದರೆ ಹಳ್ಳಿಯವರದೊಂದೇ ಉತ್ತರ—"ಶಾಲೆಕಲಿತು ನಮ್ಮ ಮಕ್ಕಳಿಗಾಗಬೇಕಾದುದೇನು?"—ಎಂದು. ಪೈಗಳು ಹತಾಶರಾಗಿ ಮನೆಗೆ ಬಂದರು. ಪಟೇಲರ ಬಳಿ ತಮ್ಮ ಗೋಳನ್ನು ಹೇಳಿಕೊಂಡರು. ಪಟೇಲರು ಯೋಚಿಸಿ, ಆರಂಭಕ್ಕೆ ಸೋಮಪ್ಪನನ್ನು ಕಳುಹಿಸಲು, ಒಪ್ಪಿಕೊಂಡರು. ಆದರೆ ಒಬ್ಬನಿಗಾಗಿ

ಪಾಠ ನಡೆಯುವುದೇ? ಆಯಿತು. ಅವನ ಹೆಸರಿನಲ್ಲೇ ಶಾಲೆ ತೆರೆಯಿತು. ಮೊದಲಿನ ದಿನ ತಮಾಷೆನೋಡುವಾ ಎಂದು ಸೋಮಪ್ಪ ಶಾಲೆಗೆ ಹೋದನು. ಪೈಗಳು — "ಅ. ಆ" — "ಅ. ಆ." — ಎಂದು ಹೇಳಿಸಿದರು. ಬರೆಯಲು ಕಲಿಸಿದರು ಇವರು ಹೇಳಿದುದನ್ನು ಅವನೂ ಒಂದೆರಡುಬಾರಿ ಹೇಳಿದನು. ಬೇಸರಬಂದಿತು ಹೇಳಿಕೊಟ್ಟ ಅಕ್ಷರಗಳನ್ನು ತಿರುಗಿ ಬರೆಯಲು ಹೇಳಿದರು. ಸೋಮಪ್ಪನಿಂದ ಅದು ಸಾಧ್ಯವಾಗಲಿಲ್ಲ. ಗದರಿಸಿದರು. ತಿರುಗಿ ಅದೇ ಹಾಡು. ಕೊನೆಗೆ ತಾವು ತಂದ ದಂಡಗಳಲ್ಲಿ ಒಂದನ್ನು ಹೊರ ತೆಗೆದರು ಏಟೂ ಬಿದ್ದಿತು ತುಸುಹೊತ್ತಿನಲ್ಲಿ ಹುಡುಗನು "ಮಾಸ್ತರ್ರೆ, ಈಗ ಬಂದೆ" — ಎಂದು ಹೊರಕ್ಕೆ ಹೋದವನು ತಿರುಗಿ ಬರಲೇ ಇಲ್ಲ. ಮರುದಿನದ ಶಾಲೆಯಲ್ಲಿ ಪೈಗಳೊಬ್ಬರೇ!

ಮಾಸ್ತರರಿಗೆ ಗಾಬರಿಯಾಯಿತು. ತಿರುಗಿ ಪಟೇಲರ ಮನೆಗೆ ಹೋದರು. ಇವರ ಕಣ್ಮುಂದೆಯೇ ಸೋಮಪ್ಪನು ಹೊರಟುಹೋದನು. "ಮಗೂ, ಎಲ್ಲಿಗೆ?" ಎಂದು ತಂದೆ ಕೇಳಲು "ಇಸ್ಕೂಲಿಗೆ" — ಎಂದನು. ಅವನ ಹಿಂದೆ ಮಾಸ್ತರರು ಹೊರಟರು. ಸೋಮಪ್ಪನ ಕಾಲುನಡೆ ಜೋರಾಯಿತು. ಮಾಸ್ತರರು ಹಿಂದುಳಿದರು. ಅವರು ಶಾಲೆಯನ್ನು ಸೇರುವಾಗ, ಅಲ್ಲಿದ್ದವರು ಅವರು ಮಾತ್ರ! ಸೋಮಪ್ಪನೊಡನೆ ರಾಜಿಯಾಗದೆ ತನ್ನ ಶಾಲೆಗೆ ಮೋಕ್ಷವಿಲ್ಲೆಂದು ತಿಳಿದು ತಿರುಗಿ ಆ ಕಾಡುಗುಡ್ಡವನ್ನೆಲ್ಲಾ ಸುತ್ತಿದರು. ಅಲೆದಲೆದು ಬೇಸರವಾಗಿ ನದಿ ತಡಿಯಲ್ಲಿ ಬಂದು ಕುಳಿತರು. ಅವರ ಕಣ್ಮುಂದೆಯೇ ಏನೋ ತೇಲಿಕೊಂಡು ಬಂದಿತು. ನೋಡುತ್ತಾರೆ — ಏನನ್ನು? ಅವರ ಡಜನ್ ಬೆತ್ತಗಳ ಕಟ್ಟನ್ನು! ಪುಸ್ತಕಗಳೂ ಬರುತ್ತಿದ್ದುವೋ ಏನೋ! ಬೀಗದಲ್ಲಿರಿಸಿದ್ದರು. ದೊಡ್ಡದೊಂದು ನಿಟ್ಟುಸಿರು ಬಿಟ್ಟರು. ಹೊತ್ತು ಮೀರುತ್ತ ಬಂದಿತು. ಸ್ನಾನವಾಗಿ, ಶಾಲೆಗೆ ಹೋಗಿ ಅಡುಗೆಮಾಡಿ ಉಣ್ಣಬೇಕು! ಉಸ್ಸೆಂದು ನೀರಲ್ಲಿಳಿದರು. ಒಮ್ಮೆಗೇ "ಕೇಕೇ" — ಎಂದು ದೊಡ್ಡ ಸದ್ದು ಕೇಳಿಸಿತು. ಬೆದರಿಕೆಯಾಯಿತು. ಇದೇನೋ ಕಾಡುಮೃಗಗಳ ಕೂಗೆಂದು ಅವಸರದಿಂದ ಮೇಲಕ್ಕೆ ಓಡಿಬಂದರು. ಎದುರಿನಿಂದ ಅವರನ್ನು ಹಾಯ್ದುಕೊಂಡೇ ಸೋಮಪ್ಪನ ವಾನರ

ಸೇನೆ ಬಂದಿತು. ಬಲವಾದ ಎರಡು ಹಲಸಿನ ಹಣ್ಣುಗಳನ್ನು ಹೊತ್ತು ತಂದಿದ್ದರು. ಸೋಮಪ್ಪನ ಕಣ್ಣಿಗೆ ಉಪಾಧ್ಯಾಯರು ಬಿದ್ದರು. "ಮಾಸ್ತರರೇ, ಒಂದನ್ನು ನಿಮ್ಮ ಮನೆಗೇ ತರಬೇಕೆಂದು ಎಣಿಸಿದ್ದೆ"ನೆಂದನು. ಸೋಮಪ್ಪನ ಗುರುಭಕ್ತಿಗೆ ಮೆಚ್ಚಿದರು! ಇದೇ ಸಂಧಿಯ ಮುಹೂರ್ತವೆಂದು ಅವರೊಡನೆ ಸ್ನೇಹ ಬೆಳೆಯಿಸಲು ಯತ್ನಿಸಿದರು ಅವರಿಗೂ ಮೊದಲು ಶಾಲೆಯ ಚರಿತ್ರೆ ಸೋಮಪ್ಪನು ಸಾರಿದ್ದನು.

ಈಗ ಹಲಸಿನ ಹಣ್ಣನ್ನು ಕತ್ತರಿಸಿದರು. ಪೈ ಮಾಸ್ತರರಿಗೆ ತುಂಬಾ ಹಸಿವಾಗಿತ್ತು. ತಿಂದು ತೃಪ್ತರಾದರು. ಮೆಲ್ಲಗೆ ಉಪನ್ಯಾಸ ತೊಡಗಿದರು. "ವಿದ್ಯೆಯೆಂದರೆ . . . ." ಎನ್ನುವಷ್ಟರಲ್ಲಿ-ಹುಡುಗರು-"ಅಹುದು. ಸೋಮಪ್ಪ ಹೇಳಿದ. ನಿಮ್ಮೂರು ಯಾವುದು ಮಾಸ್ತರರೇ?"—ಎಂದರು. ಮಾಸ್ತರರ ಧೈರ್ಯ ಪೂರ್ಣ ಕುಂದಿತು. "ಉಪ್ಪಿನಂಗಡಿ"—ಎಂದರು. "ಮಾಸ್ತರೇ, ಅಂಥಾ ಊರುಬಿಟ್ಟು ಈ ಚಳಿಜ್ವರದ ಊರಿಗೆ ಬಂದಿರಲ್ಲಾ. ಇಲ್ಲಿ ನಿಮ್ಮ ಉಳಿಗಾಲವುಂಟೇ?"-ಎಂದು ಕೇಳಿದರು ಅದೂ ಅಹುದೆಂದು ಅವರಿಗೆ ಕಾಣಿಸಿತು. ಮಾಸ್ತರರೀಗ ಬಲು ಸಾಹಸದಿಂದ ಒಪ್ಪಂದಮಾಡಿಕೊಂಡರು. ಸೋಮಪ್ಪನ ಶಾಲೆಗೆ ಅವರು ಸೇರುವುದು; ಅವರ ಸಾಲೆಗೆ ಇವರು ಸೇರುವುದು—ಎಂದು. ಮುಖ್ಯ ತಾತ್ಪರ್ಯವಿಷ್ಟೆ: ಶಾಲಾ ಇನ್ಸ್ಪೆಕ್ಟರರು ಬರುವ ದಿನ, ತಾಲೂಕು ಬೋರ್ಡಿನ ಅಧ್ಯಕ್ಷರು ಬರುವ ದಿನ, ಅವರೆಲ್ಲರು ಶಾಲೆಗೆ ಬಂದರೆ ಸಾಕು. ಉಳಿದ ದಿನ ತಾನೇ ಅವರಿರುವಲ್ಲಿಗೆ ಬರುವೆನೆಂದರು. ಅಂದಿನಿಂದ ಹಾಜರಿಪಟ್ಟಿಯಲ್ಲಿ ಹದಿನಾರು ಹುಡುಗರು ಕಾಣಿಸಿಕೊಂಡರು. ಸೋಮಪ್ಪನು ಇನ್ನೂ ಎಂಟು ಹೆಸರುಗಳನ್ನು ಕೊಡಿಸಿದನು. ಉಪಾಧ್ಯಾಯರಿಗೂ ಅವನ ಮೇಲೆ ಪ್ರಸನ್ನತೆಯುಂಟಾಯಿತು. ಮುಂದವರು ಸೋಮಪ್ಪನ ಚರವಿದ್ಯಾಲಯದ ಅಧ್ಯಾಪಕರಾದರು. ಹುಡುಗರಿಗೆ ಬೇಸರ ಬಂದಾಗ ಮಗ್ಗಿ ಕಲಿಸುವ ಯತ್ನಮಾಡುತ್ತಿದ್ದರು.

ಎರಡು ಬಾರಿ ಅವರ ಶಾಲೆಗೆ ಇನ್ಸ್ಪೆಕ್ಟರರು ಬರುವ ಸಾಹಸಮಾಡಿದರು. ಮೊದಲನೆ ಬಾರಿ, ಪೈ ಮಾಸ್ತರರು ಉಪ್ಪಿನಂಗಡಿಯಲ್ಲೇ ಭೇಟಿಯಾಗಿ—'ಅಲ್ಲಿಗೆ ಹೋಗಲು ಸಾಧ್ಯವೇ ಇಲ್ಲ ಹಾದಿತುಂಬಾ ಜಿಗಣೆಗಳ

ಕಾಟ' ಎಂದರು. ಇನ್ನೊನ್ಮೆ ಅವರು ಹೇಳದೆ ಕೇಳದೆ ತಾವಾಗಿಯೇ ಶಾಲೆಗೆ ಹೋದರು. ಶಾಲೆಯಲ್ಲಿ ನಾಲ್ಕು ಗೋಡೆಗಳು ಮಾತ್ರ ಇದ್ದುವು. ರಾಯರಿಗೆ ಬಂದಿತು ಕೋಪ. ಅಲ್ಲೇ ಪೇದೆಯ ಜತೆಯಲ್ಲಿ ಕುಳಿತರು. ದೂರದಲ್ಲಿ ಆಟವಾಡಿ ಬರುತ್ತಿದ್ದ ಸೋಮಪ್ಪನ ಕಣ್ಣಿಗೆ ಇನ್ಸ್ಪೆಕ್ಟರ ಮುಂಡಾಸು ಬಿದ್ದಿತು. ಸೋಮಪ್ಪನು ಹಿಂದಿರುಗಿ ಪೈಗಳಿರುವಲ್ಲಿಗೆ ಹೋಗಿ ತಿಳಿಸಿದನು. ಅವರಿಗೆ ಗಾಬರಿಯಾಯಿತು. ಸೋಮಪ್ಪನು ಅವರಿಗೆ ಒಳಿತಾದ ಉಪಾಯ ಹೇಳಿಕೊಟ್ಟನು. "ನದಿಪಾಠಮಾಡಲು ಹುಡುಗರನ್ನು ಕರೆದುಕೊಂಡು ನದಿಗೆ ಹೋಗಿದ್ದೆ" ಎನ್ನುವಂತೆ ಹೇಳಿಕೊಟ್ಟನು. ಜತೆಯಲ್ಲಿ ಅವನೂ ಓಡಿ ಹೋಗಿ ಮನೆಗೆ ಮರಳುತ್ತಿದ್ದ ಗೆಳೆಯರನ್ನು ಕೂಡಿಕೊಂಡು ಅವರ ಜತೆಯಲ್ಲಿ ಶಾಲೆಯ ತನಕ ಹೋದನು. ದೊರೆಗಳು ಒಮ್ಮೆಗೇ ಘರ್ಜಿಸಿದರು. ಪೈ ಮಾಸ್ತರರು "ನದಿಪಾಠ"ವೆಂದರು. ಹೆಚ್ಚಿನ ವಿಚಾರಮಾಡಲು ಹಸಿವು ಬಲವಾಗಿತ್ತವರಿಗೆ. ಅವರ ಹಿಂದೆ ನಿಂತಿದ್ದ ಪೇದೆಯು, ಮಾಸ್ತರರಿಗೆ, ಹೊಟ್ಟೆ ಬಡಿದು ಸೌಂಜ್ಞೆಮಾಡಿದನು. ಮರುಕ್ಷಣದಲ್ಲಿ ಸೋಮಪ್ಪನು ಓಡಿ ಹೋದನು. ಇನ್ಸ್ಪೆಕ್ಟರರಿಗೆ ಸಿಟ್ಟು ಬಂದಿತು—"ಆ ಹುಡುಗ ಓಡಿಹೋದುದೆಲ್ಲಿಗೆ?" ಎಂದರು. "ಸರ್, ಅದು ಪಠೇಲರ ಮಗ, ಅವರನ್ನು ಕರೆಯಲು ಹೋಗಿರಬೇಕು"—ಎಂದರು. ಮೋಸವಾಗಬಾರದೆಂದು—"ಸಿದ್ದಣ್ಣಾ, ಸೋಮಪ್ಪನ ಹತ್ತಿರ ಪಠೇಲರನ್ನು ಬೇಗ ಕರೆದುಕೊಂಡು ಬಾ ಎನ್ನು" ಎಂದರು. "ನನಗೆ ಪಠೇಲರ ಅವಶ್ಯವಿಲ್ಲ, ನಿಮ್ಮ ಹುಡುಗರ ಪರೀಕ್ಷೆಯಾಗಬೇಕು"—ಎಂದರು. ಪೈಗಳು ಸಪ್ಪಗಾದರು. ಅಷ್ಟರಲ್ಲಿ, ಸೋಮಪ್ಪನು ಹಲಸಿನಕಾಯಿಯೊಂದನ್ನು ಹೊತ್ತುಕೊಂಡು ಬಂದನು. ಅದನ್ನಿರಿಸಿ ಮಂಗನಂತೆ ತೆಂಗಿನಮರವೇರಿ ನಾಲ್ಕು ಎಳನೀರನ್ನು ಇಳಿಸಿದನು. ದೊರೆಗಳೂ ಮೊದಲು ಅದರ ಪರೀಕ್ಷೆಗೆ ಹೊರಟರು. ಪೈಗಳು ಮೆಲ್ಲಕ್ಕೆ—"ಸರ್, ಮಧ್ಯಾಹ್ನವಾಯಿತು; ಹುಡುಗರನ್ನು ಮನೆಗೆ ಕಳುಹಿಸಲೇ?" ಎಂದರು. ಅಪ್ಪಣೆ ದೊರೆಯಿತು. ಸೋಮಪ್ಪನೊಬ್ಬನನ್ನು ಉಳಿದು ಉಳಿದವರು ಮನೆಗೆ ಹೋದರು. ಸೋಮಪ್ಪನೂ ಅವರೂ ಸೇರಿ ಏನೇನೋ ಮಾತನಾಡಿಕೊಂಡರು. ಇತರ ಹುಡುಗರೊಡನೆಯೂ ಸಂಕೇತವಾಯಿತು.

ಫಲಾಹಾರವಾದ ಬಳಿಕ ದೊರೆಗಳಿಗೆ ಸ್ವಲ್ಪ ಚೈತನ್ಯ ಬಂದಿತು. ಸೋಮಪ್ಪನನ್ನು ಬಳಿಗೆ ಕರೆಯಿಸಿಕೊಂಡು—"ಇವನೇನು? ಪಟೇಲರ ಹುಡುಗ. ಮಗೂ, ತಂದೆಯವರು ಮನೆಯಲ್ಲಿರುವರೇ?"— ಎಂದು ಕೇಳಿದರು. ಸೋಮಪ್ಪ—"ಸರ್, ಅವರು ಇಂದು ಮುಂಜಾನೆಯೇ ಪುತ್ತೂರಿಗೆ ಹೊರಟುಹೋದರು. ಆದರೆ ತಾವು ಬರಲಿಕ್ಕೂ ಸಾಕು; ಬೇಕಾದ ವಿಲೆವಾರಿ ಮಾಡು ಎಂದು ಹೋಗಿದ್ದರು"—ಎಂದನು. ದೊರೆಗಳು ಮತ್ತಷ್ಟು ಪ್ರಸನ್ನರಾದರು. "ಈ ಹುಡುಗ ಪಾಠದಲ್ಲಿ ಹೇಗೆ?" ಎಂದು ಕೇಳಲು ಪೈಗಳು—"ಅವನ ವಿಷಯ ಕೇಳುವುದೇ ಬೇಡ"—ಎಂದರು. ತುಸು ಹೊತ್ತಿನಲ್ಲಿ, ಹುಡುಗರು ಸಣ್ಣಕ್ಕಿ, ತುಪ್ಪ, ಕಾಯಿ, ತರಕಾರಿ— ಇವೆಲ್ಲವನ್ನು ತಂದರು. ಪೈ ಮಾಸ್ತರರು ಅಡುಗೆಗೆ ಕುಳಿತರು. ಸೋಮಪ್ಪನು ದೊರೆಗಳ ಹತ್ತಿರ "ಸರ್, ಮನೆಗೆ ಹೋಗಿ ಬರಲೇ?"—ಎಂದನು. ದೊರೆಗಳೂ "ಇಲ್ಲೇ, ಊಟಮಾಡಬಹುದಲ್ಲ" ಎಂದು ಅಗ್ರುಹಪಡಿಸಲು ಸೋಮಪ್ಪನು ಒಪ್ಪಿ ಕುಳಿತನು.

ದೊರೆಗಳೀಗ ಸುಮ್ಮನೆ ಕುಳಿತಿರಲಾರದೆ–"ಸೋಮಪ್ಪನೆಂದು ನಿನ್ನ ಹೆಸರಲ್ಲವೇ? ನಿನಗೊಂದು ಲೆಕ್ಕ ಕೇಳುತ್ತೇನೆ ಹೇಳುವಿಯಾ?"—ಎಂದರು. ಪೈ ಮಾಸ್ತರರ ಎದೆ ಘಸಕ್ಕೆಂದಿತು. "ಹೂಂ" ಎನ್ನಲು ಸಂಕೇತ ಮಾಡಿದರು. ಸೋಮಪ್ಪನು "ಹೂಂ" ಎಂದನು "ಒಂದು ಮಾವಿನ ಹಣ್ಣಿಗೆ ಒಂದಾಣೆಯಾದರೆ, 32 ಹಣ್ಣುಗಳಿಗೇನು ಕ್ರಯ?" ಎಂದು ಕೇಳಿದರು. ಪೈಮಾಸ್ತರರು ಹಿಂದಿನಿಂದ ಎರಡು ಬೆರಳನ್ನು ತೋರಿಸಿದರು. "ಸೋಮಪ್ಪ"– ಎರಡು ಎಂದನು. "ಏನು? ಎರಡು ರೂಪಾಯಿಗಳೇ?" "ಅಹುದು." ಎರಡು ಆಣೆಗಳೇ ಎಂದರೂ ಅಹುದೆನ್ನುತ್ತಿದ್ದನು. ಹೀಗೆ ನಾಲ್ಕಾರು ಲೆಕ್ಕಗಳಾದುವು. ಸೋಮಪ್ಪನು ಪ್ರತಿಯೊಂದು ಸರಿಯೇ. ದೊರೆಗಳು ಸುಮ್ಮನಾದರು. ಮಾಸ್ತರರು, ಪರೀಕ್ಷೆ ಮುಗಿಯಿತೆಂದು ಧೈರ್ಯದಿಂದ ಬಾವಿಗೆ ನೀರು ತರಲು ಹೋದರು. ಸೋಮಪ್ಪನು ಇನ್ನೂ ದೊರೆಗಳ ಬಳಿಯಲ್ಲೇ ಇದ್ದನು. ದೊರೆಗಳು ಒಮ್ಮೆಗೇ—"ಒಂದು ಫರಂಗಿ ಹಲಸಿಗೆ(ಅನನ್ನಾಸು) ನಾಲ್ಕಾಣೆ ಕ್ರಯವಾದರೆ ಎರಡು ರೂಪಾಯಿಗಳಿಗೆ ಎಷ್ಟು ಹಣ್ಣುಗಳು ಸಿಗು

ತ್ತವೆ?"—ಎಂದು ಕೇಳಿದರು. ಸೋಮಪ್ಪ ದಿಗಿಲುಬಿದ್ದ. ಅಡುಗೆ ಮಾಡು ತ್ತಿರುವಲ್ಲಿ ನೋಡಿದನು. ಮಾಸ್ತರರು ಇದ್ದಿರಲಿಲ್ಲ. ಉಪಾಯ ಮಾಡು ತ್ತೇನೆಂದು ಅಲ್ಲಿಂದೆದ್ದು ಓಡಿಯೇ ಓಡಿದನು. ದೊರೆಗಳಿಗೆ "ಯಾಕೆ? ಏನು?" ಎಂದು ತಿಳಿಯಲಿಲ್ಲ. ಊಟಕ್ಕಾಯಿತು. ಸೋಮಪ್ಪನಿಲ್ಲ. ಅವನಿಗಾಗಿ ಕಾದು ಕುಳಿತಿರಬೇಕೇ ಎಂದು ದೊರೆಗಳ ಯೋಚನೆ. ಪೈಗಳ ಆಗ್ರಹದ ಮೇಲೆಗೆ ಊಟಕ್ಕೆ ಕುಳಿತರು. ಸೋಮಪ್ಪನು ಬಂದನು. ಕೈಯಲ್ಲಿ ಗಮ ಗಮಿಸುವ ಫರಂಗಿ ಹಲಸು! "ಸರ್, ನೀವು ಫರಂಗಿ ಹಲಸು ಎನ್ನುವಾಗ ನೆನಪಾಯಿತು. ಮನೆಯಲ್ಲೊಂದಿತ್ತು. ಊಟವಾದ ಬಳಿಕ ತಿನ್ನುವುದಕ್ಕೆಂದು ತಂದುಬಿಟ್ಟೆ"—ಎಂದನು. ದೊರೆಗಳು ಮೆಚ್ಚಿಬಿಟ್ಟರು. ಎಲ್ಲರಿಗೂ ಊಟ ವಾಯಿತು.

ಊಟಮುಗಿಯುವಾಗ ಮಧ್ಯಾಹ್ನ ಮೂರು ತಾಸು ಮೀರಿಹೋ ಗಿತ್ತು. ಇನ್ನು ತಿರುಗಿ ಇತರ ಹುಡುಗರನ್ನು ಪರೀಕ್ಷೆಮಾಡಿದರೆ ಎಂಬ ಅಂಜಿಕೆ ಪೈಗಳಿಗೆ. ಅದಕ್ಕಾಗಿ ಸೋಮಪ್ಪನ ಕಿವಿಚುಚ್ಚಿದರು. ಸೋಮಪ್ಪ ನು ದೊರೆಗಳ ಬಳಿ ಧೈರ್ಯವಾಗಿ ನಿಂತು—"ಸರ್, ನಾಳೆ ಅಲ್ಲವೇ ನೀವು ಹೋಗುವುದು?" ಎಂದನು. ದೊರೆಗಳು—"ಇಲ್ಲ ಮಗು, ಇವತ್ತು ಹೇಗಾದರೂ ಮಾಡಿ ಉಪ್ಪಿನಂಗಡಿಯ ವರೆಗಾದರೂ ಹೋಗಬೇಕು" ಎಂದರು. "ಇಲ್ಲ ಸರ್, ನಾಳೆ ಒಂದು ದಿನ ಇದ್ದುಬಿಡಿ ಸರ್. ಈ ಊರಲ್ಲಿ ಒಳ್ಳೇ ಮಾವಿನಹಣ್ಣು ಆಗುವ ಸಮಯವಿದು. ಅಲ್ಲದೆ ನಾಳೆ ತಂದೆಯವರೂ ಬರುತ್ತಾರೆ"—ಎಂದನು. ದೊರೆಗಳು ನಾಳೆ ಮಧ್ಯಾಹ್ನ ದೊಳಗೆ ಪುತ್ತೂರನ್ನು ಸೇರದೆ ಮಾರ್ಗವಿಲ್ಲವಂತೆ. ಆಗ ಸೋಮಪ್ಪ ನೆಂದನು—"ಹಾಗಿದ್ದರೆ, ನೀವು ಈಗಲೇ ಹೊರಡಬೇಕು. ತೀರ ಕಾಡು ಹಾದಿ. ಹುಲಿಗಳ ಉಪದ್ರ ಬಹಳ"—ಎಂದನು. ಕಾಡುಮೃಗಗಳ ಹೆಸರು ಕೇಳಿ ದೊರೆಗಳಿಗೆ ಚಳಿಹಿಡಿಯಿತು. ಕೂಡಲೆ ದಪ್ತರಕಟ್ಟಿ ಹೊರ ಟರು. ಸ್ವಲ್ಪದೂರ ಸೋಮಪ್ಪನೂ ಪೈಮಾಸ್ತರರೂ ಅವರನ್ನು ಬೀಳ್ಕೊಟ್ಟು ಬಂದರು. ಅಗಲುವಾಗ ದೊರೆಗಳು ಅವನ ಬೆನ್ನುಚಪ್ಪರಿಸಿ "ಪಕ್ಕಾ ಸ್ಮಾರ್ಟ್ ಯು ಆರ್"—ಎಂದರು.

ಸೋಮಪ್ಪನಿಗೆ ಆ ಇಂಗ್ಲಿಷು ತಿಳಿಯಲಿಲ್ಲ. ದೊರೆಗಳು ಕಣ್ಮರೆಯಾಗಲು ಅವರಂದುದೇನೆಂದು ಕೇಳಿದನು. "ನೀನು ಒಳ್ಳೇ ಸ್ಕೌಟಂತೆ" ಎಂದರು. "ಸ್ಕೌಟು" "ಎಂದರೇನು?" ಎಂದು ತಿರುಗಿ ಪ್ರಶ್ನೆಮಾಡಿದನು. ಪೈ ಮಾಸ್ತರರು ತಮಗೆ ತಿಳಿದುದನ್ನೂ, ತಿಳಿಯದಿದ್ದುದನ್ನೂ, ಊಹಿಸಿದ್ದುದನ್ನೂ ಸೇರಿಸಿ ವಿವರಿಸಿದರು. ಸೋಮಪ್ಪನ ಕಿವಿ ನೆಟ್ಟಗಾಯಿತು. ತನ್ನ ಊರಿನಲ್ಲೂ ಸ್ಕೌಟಾಗಬೇಕೆಂದು ಹಟಹಿಡಿದನು. ಸೋಮಪ್ಪನ ಆಗ್ರಹವಲ್ಲವೇ?

ಅದೇ ವರುಷದ ತಾಲೂಕು ಸ್ಕೌಟು 'ರಾಳಿ'ಯಲ್ಲಿ ಸೋಮಪ್ಪನೂ ಒಬ್ಬನು. ಆ ಪಚ್ಚೆ ಮುಂಡಾಸು ಇಜಾರು ಅಂಗಿಗಳಿಗೆ ಮೆಚ್ಚಿದನು. ಅವನಿಗೆ ಅವರ ಡ್ರಿಲ್ಲುಗಿಲ್ಲು ಸರಿತೋರಲಿಲ್ಲವಂತೆ! ಆಟಗಳ ಮಟ್ಟಿಗೆ ಮೆಚ್ಚಿದನು. 'ರಾಳಿ'ಗೆ ಅವನ ಶಾಲೆಯಿಂದ ಹೋದವರು ಪೈ ಮಾಸ್ತರರೂ ಅವನೂ ಇಬ್ಬರೇ. ಉಳಿದ ಹುಡುಗರಿಗೆ ಮನಸ್ಸಿತ್ತು; ಕಾಸಿರಲಿಲ್ಲ. ಪೈಗಳು ಬಂದೊಡನೆಯೇ ಮಾಡಿದ ಮೊದಲನೆಯ ಕೆಲಸವೆಂದರೆ, ದಣಿದು ಬಂದ ಹುಡುಗನಿಗೆ "ಅಹ್ಲಾದ ವಿಲಾಸ"ದಲ್ಲಿ ಒಂದು ಬಿಮ್ಮಗಿನ ಉಪಾಹಾರ ಕೊಡಿಸಿದುದು. ಅಲ್ಲಿಂದ ಹೊರಟು ಸ್ಕೌಟು ಶಿಬಿರದಲ್ಲಿ ತಂಗಿದರು. ಆದರೆ ಸೋಮಪ್ಪನಿಗೆ ಅವರ ಊಟವನ್ನು ಕಂಡು ಬೇಸರವಾಯಿತು. "ಊಟದಲ್ಲಿ ನಾಜೂಕಿಲ್ಲದ ಮೇಲೆ ಈ ಸ್ಕೌಟು ಏಕೆ"—ಎಂದುಕೊಂಡನು. 'ರಾಳಿ'ಯ ಮೂರು ದಿನಗಳಲ್ಲಿ ಸೋಮಪ್ಪನು ಆರು ಸಾರಿ "ಅಹ್ಲಾದ ವಿಲಾಸ"ಕ್ಕೆ ಹೋಗಿಬಂದನು. ಶಿಬಿರದಿಂದ ಅಪ್ಪಣೆಯಿಲ್ಲದೆ ಹೊರಡಬಾರದೆಂಬ ನಿಯಮ. ಅಹ್ಲಾದ ವಿಲಾಸಕ್ಕೆ ಅಪ್ಪಣೆದೊರೆಯದೆಂದು ಅವನಿಗೆ ಗೊತ್ತು. ಅದರಿಂದ ಮೊದಲನೆ ಬಾರಿಗೆ ಮೆಲ್ಲಗೆ ಪೈಮಾಸ್ತರರ ಬಳಿ ಬಂದು "ಮಾಸ್ತರರೇ, ಆ ಹಾಳಾದ ವಿಲಾಸಕ್ಕೆ ಹೋಗಿಬರಲೇ?"--ಎಂದನು. ಅವರು "ಬೇಗ ಬಾ" ಎಂದರು. ಇವನು ಬೇಗನೇ ಬಂದನು. ಆದರೆ ಎದುರಿಗೆ ಹಾಳಾದ ದಳನಾಯಕರು ಸಿಕ್ಕಿದರು "ಯಾರು ನೀನು?" ಎಂದರು. "ನಾನು ಸರ್. ಅಹುದು ನಾನು . . . . ಸ್ಕೌಟು ಸರ್."

"ಎಲ್ಲಿಗೆ ಹೋದದ್ದು?"

"ಪೈ ಮಾಸ್ತರರ ಹತ್ತಿರ ಕೇಳಿಹೋಗಿದ್ದೆ."

ಸ್ವಲ್ಪ ದೂರದಲ್ಲಿ ಪೈ ಮಾಸ್ತರರು ನಿಂತಿದ್ದರು. ಅವರು ಗಾಬರಿಗೊಂಡು ಅಲ್ಲಿಗೆ ಬಂದರು. ದಳನಾಯಕರ ಪ್ರಶ್ನೆ ಬರುವುದರಲ್ಲಿ "ಸರ್, ಆ ಹುಡುಗನ ಚಿಕ್ಕಪ್ಪನ ಮಗ ಕಾಹಿಲೆಯಾಗಿ ಆಸ್ಪತ್ರೆಗೆ ಬಂದಿದ್ದಾನೆ. ಅವನನ್ನು ನೋಡಲು ಹೋಗಬೇಕೆಂದನು. ನೀವಿದ್ದಿರಲಿಲ್ಲ. ನಿಮಗೆ ನಾನೇ ತಿಳಿಸುವೆನೆಂದು ಹೇಳಿ ಕಳುಹಿಸಿದೆ"—ಎಂದರು. ಅಲ್ಲಿಗೆ ಮುಗಿಯಿತು. ಬಳಿಕ ಆ ಮೂರು ದಿನ ಆ ಹಾಳಾದ ವಿಲಾಸ ಕಂಡುಬರುವುದು ಅವನಿಗೆ ಸುಲಭವಾಯಿತು. ಬರುವಾಗ ಕಿಸೆಯನ್ನು ತುಂಬಿಸಿಕೊಂಡೇ ಬರುತ್ತಿದ್ದನು. ಹೀಗಾಗಿ ಮೂರು ದಿನದ ಅಂತ್ಯದಲ್ಲಿ, ಸೋಮಪ್ಪನಿಗೆ ನಾಲ್ಕು ಮಂದಿ ಪ್ರಾಣಮಿತ್ರರು ತಗಲಿಕೊಂಡರು. ಅವರು ಪುತ್ತೂರಿನ ಬಾಲಕರು. ಕೊನೆಯ ದಿನ ಅಗಲುವಾಗ—"ಸೋಮಪ್ಪಾ, ಬರುವ ವರ್ಷ ಖಂಡಿತ ನಮ್ಮ ಶಾಲೆಗೆ ಬರಬೇಕು"—ಎಂದರು.

ಬರುವ ವರ್ಷ ಬಂದಿತು ಹುಡುಗರಿಲ್ಲದ ಶಾಲೆಗೆ ಬೋರ್ಡಿನ ಅಧ್ಯಕ್ಷರು ಆಗಮಿಸಿದರು. ಪೈಗಳು ಆಗ ತಮ್ಮೂರಿನಲ್ಲಿಯೇ ಇದ್ದರು. ಶಾಲೆ ಇಲ್ಲಿ ನಡೆಯುತ್ತಿತ್ತು. ಹೀಗಾಗಿ ಪೈಗಳಿಗೆ ಉಪ್ಪಿನಂಗಡಿಯೇ 'ಕಾಯಂ' ಆಯಿತು. ಪೈಗಳಂತಹ ಗೆಳೆಯರು ಹೋದುದಕ್ಕೆ ಸೋಮಪ್ಪನಿಗೆ ವ್ಯಥೆಯಾಯಿತು. ಇತ್ತ ಪುತ್ತೂರಿನ ನವೀನ ಗೆಳೆಯರೊಡನೆ ಪರಿಚಯಗೊಂಡು ಸೋಮಪ್ಪಗೆ ಪೇಟೆಸೇರುವ ಲವಲವಿಕೆಯಾಯಿತು. ಅವನ ಅದೃಷ್ಟಕ್ಕೆ ಸರಿಯಾಗಿ, ಪಟೇಲ ಸುಬ್ಬಪ್ಪನವರ (ಸೋಮಪ್ಪನ ತಂದೆ ಹೆಸರು) ವಕೀಲರು ಒಂದು ದಿನ "ನಿಮ್ಮ ಹುಡುಗನನ್ನು ಇಲ್ಲಿಯ ಶಾಲೆಗೇಕೆ ಕಳುಹಿಸಬಾರದೆ"ಂದು ಗದರಿಸಿದುದರಿಂದ ಹೂಂಗುಟ್ಟಿ ಒಪ್ಪಿದರು. ಮಗನನ್ನು ಒಬ್ಬ ವಕೀಲನನ್ನಾಗಿ ಮಾಡಬಾರದೇಕೆ ಎಂಬ ಅಭಿಲಾಷೆ ಅವರಲ್ಲಿ ಹುಟ್ಟಿತು. ಸೋಮಪ್ಪನು ಬೆಟ್ಟದ ತೊಪ್ಪಲನ್ನು ಬಿಟ್ಟು ಪಟ್ಟಣದ ಮಗ್ಗುಲನ್ನು ಸೇರಿದನು.

ಬಂದವನೇ ಒಂದು ಹೋಟೇಲನ್ನು ಸೇರಿದನು. ಅಲ್ಲಿಂದ ಅವನ ಪೂರ್ವಪರಿಚಯದ "ಆಹಾಳಾದ ವಿಳಾಸ" ತೀರ ಸಮೀಪವಾಗಿತ್ತು. ಶಾಲೆಗೆ ಹೆಸರನ್ನು ಕೊಡುವ ಮೊದಲೇ ಅಲ್ಲಿಗೆ ತನ್ನ ಹೆಸರನ್ನು ಕೊಟ್ಟು

ಬಂದನು. ಸುಬ್ಬಪ್ಪನವರು ಮಗನಿಗೆ ನಗರಪರಿಚಯವನ್ನುಂಟುಮಾಡಿ ಕೊಡಲು ಬಂದಿದ್ದರು. ಈಗ ಸುಬ್ಬುವಿಗೆ ಹದಿನೆರಡು ವರುಷ ಪ್ರಾಯ. ಅವನನ್ನು ಐದನೇ ದರ್ಜೆಗೆ ಸೇರಿಸಿದರು. ಸುಬ್ಬುವಿನ ಗೆಳೆಯರೆಲ್ಲ ಚೋಟುದ್ದದ ಬಾಲಕರು. ಇವನ ಉದ್ದಳತೆ ನೋಡಿಯೇ ಇವನಿಗೆ ತರಗತಿಯ ಹಿರೇಮಾಣಿ ಕೆಲಸ ದೊರೆಯಿತು. ಆದರೇನು ಫಲ? ಮೊದಲಿನ ಕೆಲವು ದಿನಗಳೇನೋ ನಿರಾತಂಕವಾಗಿ ಸಾಗಿದುವು. ಶಾಲಾಪ್ರಾರಂಭವಾದುದರಿಂದ ಪಾಠಗಳ ಗಲಭೆ ತೊಡಗಿರಲಿಲ್ಲ. ದಿನಹೋಗುತ್ತ, ಉಪಾಧ್ಯಾಯರ ಕಾಟ ಬಲವಾಯಿತು. ಪೈ ಮಾಸ್ತರರಿಗಿಂತ ಎಲ್ಲವರೂ ಜೋರಿನ ಮಾಸ್ತರರು! ಕ್ಲಾಸಿನಲ್ಲಿ ಕುಳಿತರೆ ಅವನಿಗೆ ತೂಕಡಿಸಿಬರುತ್ತಿತ್ತು. ಮೆಲ್ಲನೆ ಮೂರು ತಿಂಗಳಲ್ಲಿ ಇವನ ಹಿರೇಮಾಣಿತನವೂ ತಪ್ಪಿತು. ಗುಣ (Marks)ಗಳನ್ನು ಕೊಡಲು ತೊಡಗಿದರು. ಸೋಮಪ್ಪನಿಗೆ ಸೊನ್ನೆಯ ಮೇಲಿನ ಮಮತೆ ಬೆಳೆಯಿತು. ತಿಂಗಳ ಅಂತ್ಯಕ್ಕೆ ನೋಡುತ್ತಾನೆ—ಅವನು ತುದಿಯಿಂದ ಎಣಿಕೆಹಾಕಿದರೆ ಮೊದಲಿನವನಾದನು. ತೀರ ನಾಚುಗೆಗೇಡೆಣಿಸಿತು. ಆದರೆ ಪಾಠಗಳ ಮೇಲೆ ಮಮತೆಯುಂಟಾಗದು.

ಇತ್ತ ಅವನನ್ನು ನಗರಕ್ಕೆ ಆಮಂತ್ರಿಸಿದ ಸ್ನೇಹಿತಬಾಲರೂ ದೊರೆತರು. ಆದರೆ ಅವರು ಇವನಿಂದ ನಾಲ್ಕೈದು ತರಗತಿಗಳ ಅಂತರದಲ್ಲಿದ್ದರು. ಶಾಲಾ ಸಮಯವನ್ನು ಬಿಟ್ಟರೆ ಉಳಿದ ಸಮಯದಲ್ಲಿ ಅವನು ಅವರ ಜತೆಯಲ್ಲೇ ಕಾಲಕಳೆಯತೊಡಗಿದನು. ಪಾಠಗಳ ಮಟ್ಟಿಗೆ ಹಿಂದಾದರೂ ಆಟಗಳ ಮಟ್ಟಿಗೆ ಮುಂದಾದನು. ಸೋಮಪ್ಪನ ಹಿಂದೆ ರಾಮಣ್ಣ, ಕೀರ್ತಿರಾಜ, ಗಣೇಶ, ಸೀತಾರಾಮ—ಎಂಬ ಐದು ಜನ ದಂಡಾಳುಗಳು ಸೇರಿದರು. ಇವರ ಗೆಳೆತನವು ಹೆಚ್ಚುತ್ತಹೋದಂತೆ ಶಾಲೆಯ ಹಾಜರಿಯು ಕಡಿಮೆಯಾಗುತ್ತ ಬಂದಿತು; ಅದನ್ನು ಭರತಿಮಾಡಲು ಆಹ್ಲಾದ ವಿಲಾಸದ ಹಾಜರಿ ಹೆಚ್ಚಿಸಿದರು. ಭೂಗೋಲ ಬಂದಿತೆಂದರೆ ಈ ನಮ್ಮ ತುಂಟರತಂಡದವರಿಗೆ ಲಡ್ಡು, ತುಪ್ಪದ ದೋಸೆಗಳ ನೆನಪೇ ಆಗುವುದು. ಗೆಳೆಯರ ಕೂಟದ ಆಸೆಯಿಂದ ಒಂದು ವರ್ಷಕಾಲವನ್ನು ಸೋಮಪ್ಪ ಕಳೆದನು. ಪರೀಕ್ಷೆಯಲ್ಲಿ ತೇರ್ಗಡೆಯಾದನಂತೆ. ಹೇಗೋ ನಮಗೆ ತಿಳಿಯದು.

ಅಂತು ಅವನು ಎರಡು ಮೂರು ತರಗತಿಗಳಲ್ಲೂ ತಪ್ಪದೆ ಪಾಸಾದನೆಂದಿಷ್ಟೆ ಹೇಳುವೆವು. ಈಗ ಅವನು ಕಾಲಿಟ್ಟಿರುವುದು III ಫಾರ್ಮಿನಲ್ಲಿ. ಪಾಸಾದ ಬಗೆ ಹೇಗೆಂದು ಅವನ ತುಂಟರತಂಡಕ್ಕೇ ಗೊತ್ತು. ಅವರೆಲ್ಲರೂ ಇವನ ಅನುಯಾಯಿಗಳಾದರು. ಚರಿತ್ರೆ, ಗಣಿತಕ್ಕಿಂತ ಚಿಣಿಕೋಲು, ಪಾಕಶಾಸ್ತ್ರಗಳ ಪರಿಚಯವು ಇವರಿಗಧಿಕವಾಯಿತು. ಪರೀಕ್ಷೆ ಬಂದರೆ ಸುಲಭದಲ್ಲಿ ಪಾಸಾಗುವ ಉಪಾಯವಿದೆಯೆಂದು ಅವರೆಲ್ಲರ ಮತ. ಅದಕ್ಕಾಗಿ ಇಡಿ ವರುಷವೆಲ್ಲ ದುಡಿಯುವ ಕಾರಣವಿಲ್ಲವಂತೆ. ಈ ಅಮೂಲ್ಯ ಕಲೆಯನ್ನು "ಪೋಟೋಗ್ರಾಫಿ"—ಎಂದು ಅವರು ತಮ್ಮ ಗುಪ್ತಭಾಷೆಯಲ್ಲಿ ಕರೆಯುತ್ತಿದ್ದರು.

ಸುಬ್ಬಪ್ಪನವರಿಗೆ ಮಗನ ವಿದ್ಯಾಭ್ಯಾಸದ ವಿಚಾರ ಅವನಿಗೆ ತಿಳಿದಷ್ಟೆ ತಿಳಿದಿದೆ. ತಿಂಗಳು ತಿಂಗಳಿಗೆ ಇಷ್ಟು ರೂಪಾಯಿಗಳನ್ನು ಕೊಡುವುದು ಅವರ ಕೆಲಸ. ಕಡಿಮೆ ಬಿದ್ದರೆ ಅವನೇ ಕೇಳುವನು. ಒಂದು ದಿನ ಅವರು ಪೇಟೆಗೆ ಬಂದಾಗ, ಊರ ಹಾಸ್ಟೆಲಿನ ವ್ಯವಸ್ಥಾಪಕರ ದರ್ಶನವಾಯಿತು. "ಏನು ಸ್ವಾಮಿ, ಆಗಾಗ ಪುತ್ತೂರಿಗೆ ಬರುತ್ತೀರಿ?"—ಎಂದು ಕೇಳಿದರು. "ಏನಿಲ್ಲ, ನಮ್ಮೊಬ್ಬ ಹುಡುಗ ನಿಮ್ಮ ಶಾಲೆಯಲ್ಲೇ ಕಲಿಯುತ್ತಿರುವನಲ್ಲ"—ಎಂದರು. ಸರಿ, ಸೋಮಪ್ಪನ ಹೆಸರು ಬಂದಿತು. ಅವರು ಸೋಮಪ್ಪನ ತಂಡದವರಿಗೇನೆ ಪೋಲಿಕೂಟವೆಂದು ಹೆಸರಿರಿಸಿ ಅಷ್ಟರಲ್ಲಿಯೇ ತೃಪ್ತರಾಗಿದ್ದರು. ಸುಬ್ಬಪ್ಪನವರ ಮಗನೆಂದು ತಿಳಿದು ಸಹಾನುಭೂತಿ ಬಂದಿತೋ ಏನೋ—"ಅವನನ್ನು ನಮ್ಮ ಹಾಸ್ಟೆಲಿಗೇಕೆ ಕಳುಹಿಸಬಾರದು?"—ಎಂದರು.

"ನಿಮ್ಮ ಹಾಸ್ಟೆಲಿನಲ್ಲಿ ತಿಂಗಳಿಗೆ ೪೦ ರೂಪಾಯಿಗಳ ವರೆಗೂ ಬೇಕಾಗುತ್ತದಂತೆ. ಈಗಾದರೆ ೩೦ರೊಳಗೆ ಮುಗಿಯುತ್ತದೆ." "ಯಾರು ಹೇಳಿದರು? ನಮ್ಮಲ್ಲಿ ಎಲ್ಲಾ ಖರ್ಚುಗಳು ಸೇರಿ ೧೫ಕ್ಕೆ ಬರುವುದಿಲ್ಲ."

ಸುಬ್ಬಪ್ಪನವರಿಗೆ ಆಶ್ಚರ್ಯವಾಯಿತು! ಅವರ ಮಾತಿನ ಮೇರೆಗೆ ಹಾಸ್ಟೆಲಿಗೆ ಹುಡುಗನನ್ನು ಸೇರಿಸುವ ನಿಶ್ಚಯಮಾಡಿದರು. ನಿಶ್ಚಯವೇನು—ಮರುದಿನಕ್ಕೆ ಸೋಮಪ್ಪನನ್ನು ಕರೆತಂದು ಅವರಿಗೊಪ್ಪಿಸಿಯಾಯಿತು.

ಸೋಮಪ್ಪನು ಕಿಡಿಕಿಡಿಯಾದನು. ಮೊದಲು ಶಾಲೆಯ ಹೊರಗಾದರೂ ಅವನಿಗೆ ಸ್ವಾತಂತ್ರ್ಯವಿತ್ತು. ಈಗ ಅದೂ ಇಲ್ಲದಾಯಿತು. ಶಾಲೆಯನ್ನು ಬಿಟ್ಟು ಮನೆಗೆ ಬಂದರೆ ಅಲ್ಲಿ ಇನ್ನೊಬ್ಬರು ಯಜಮಾನರು ಕಾದಿರುವರು! ಆದರೆ ಸೋಮಪ್ಪನು ಸೊಪ್ಪುಹಾಕುವ ಜೀವಿಯಲ್ಲ!

ಶಾಲೆಯಿರುವಾಗಲೇ ಅವನ ಸ್ವಾತಂತ್ರ್ಯಕ್ಕೆ ಅನುಕೂಲತೆಮಾಡಿಕೊಳ್ಳತೊಡಗಿದನು. ಒಂದು ದಿನ ಶಾಲೆಗೆ ಕಾಲಿಟ್ಟೊಡನೆಯೇ ಅವನಿಗೆ ತಲೆನೋವು; ಇನ್ನೊಂದು ದಿನ ಹೊಟ್ಟೆಬೇನೆ. ವ್ಯವಸ್ಥಾಪಕರು ಬರುವಾಗ ಪಾಪದ ಸೋಮಪ್ಪನು ಹಾಸುಗೆಯಲ್ಲಿ ನರಳುತ್ತಿರುವನು ಆದರೆ ಪ್ರತಿದಿನ ಹೀಗೆಮಾಡಲು ಬರುವುದೇ?

ಸಂಜೆ ಯಾವಾಗಲೂ ಕೊನೆಯ ಘಂಟೆಯೆಂದರೆ ಸೋಮಪ್ಪನ ಪ್ರೀತಿಯ ಘಂಟೆ. ಆ ಸಮಯದಲ್ಲಿ ಅವನಿಗೆ ತಲೆನೋವು ತೊಡಗುವುದು ಬಹು ಬೇಗ ಸಂಜೆ ವ್ಯಾಯಾಮ ಪಾಠವು ಇರುವುದಾದರೆ ಅದು ತಪ್ಪದೆ ಬರುವುದು. ಆ ಗಳಿಗೆ ಬರಲು ಡ್ರಿಲ್ಲುಮಾಸ್ತರರ ಬಳಿ ಹೋಗುವನು. ತಲೆಯೊತ್ತಿಹಿಡಿದು–"I am suffering from nothing" ಎನ್ನುವನು. ಇಂಗ್ಲಿಷು ಅರಿಯದ ಡ್ರಿಲ್ಲು ಉಪಾಧ್ಯಾಯರವರು "ಸಫರಿಂಗ್" ಎಂದು ಕೇಳಿದೊಡನೆಯೇ, ಏನೋ ವೇದನೆಯೆಂದು ತಿಳಿದು, "ಹೂಂ" ಎನ್ನುವರು. ಈ ರಹಸ್ಯವು ಇತರ ಬಾಲಕರಿಗೂ ಸಿಕ್ಕಿತು. ಅವರಿಗೂ ಈ "ನಥಿಂಗ್" ಬೇನೆ ಅಂಟಿತು. ಇದು ತೀರ ಪ್ರಬಲವಾದುದನ್ನು ಕಂಡು ಅವರು, ವರ್ಷಾವಧಿ ಹುಡುಗರ ವೈದ್ಯಕೀಯ ಪರೀಕ್ಷೆಗೆ ಬರುವವರೊಡನೆ—"ನಮ್ಮ ಶಾಲೆಯ ಹುಡುಗರಿಗೆ ಬಹುವಾಗಿ ಈ "ನಥಿಂಗ್" ಬೇನೆಯು ಇಷ್ಟೇಕೆ ಬರುತ್ತಿದೆ?" ಎಂದು ಕೇಳಿದರು. ಅವರಿಗೆ ಆಶ್ಚರ್ಯವಾಯಿತು. ಮುಂದೆ ವಿಚಾರವನ್ನು ಬಿಡಿಸಿ ಹೇಳಲು ಅದರ ಮರ್ಮವು ತಿಳಿಯಿತು.

ಒಂದು ದಿನ ಸೋಮಪ್ಪನು, ಅವರ ಪಾಠ ಬರಲು ರಜೆ ಕೇಳಲು ಹೋದನು.

"ರಜೆಯೇಕೆ ನಿನಗೆ?"

"I am suffering from . . . ."

"ಏನೆಂದೆ?" ಎಂದು ಗದರಿಸಿ ಕೇಳಿದರು.

"ಏನಿಲ್ಲ. ಸರ್"--ಎಂದನು. ಅಲ್ಲಿಗೆ ಅವನ ಒಂದು ತಂತ್ರ ಮುಗಿಯಿತು.

ಸೋಮಪ್ಪನ ಸತ್ಯ ಉಳಿದ ಉಪಾಧ್ಯಾಯರುಗಳಿಗೂ ತಿಳಿದು ಅವನಿಗೆ ರಜೆಯೇ ಸಿಗುವುದು ಕಠಿಣವಾಯಿತು. ಇದರಿಂದ ಅವನಿಗೆ ಜಿಗುಪ್ಸೆಹುಟ್ಟಿ ವಿದ್ಯಾಭ್ಯಾಸ ಬೇಡವೆನ್ನುವಷ್ಟಾಯಿತು. ಆದರೆ ಪೇಟೆಯನ್ನು ಬಿಡಲು ಮನಸ್ಸಿಲ್ಲ.

ಅವನ ಏನು ತಂತ್ರಗಳಿದ್ದರೂ ಇನ್ನು ಹಾಸ್ಟೆಲಿನಲ್ಲಿಯೇ ನಡೆಯ ಬೇಕು. ಆದರೆ ಅವರೊಬ್ಬರಿರುವರಲ್ಲ, ಮಾರಿ. ಯೋಚಿಸಿ ಯೋಚಿಸಿ ಬೇಸತ್ತನು. ಕೊನೆಗೆ ಹೊಳೆಯಿತು—ಒಕ್ಕಟ್ಟಿನಲ್ಲಿ ಬಲವಿದೆಯೆಂದು. ಮಿಕ್ಕುಳಿದ ವಿದ್ಯಾರ್ಥಿಗಳನ್ನು ತನ್ನ ಪಡೆಗೆ ಸೇರಿಸುವ ಯತ್ನಮಾಡಿದನು. ಆದರೆ ತೀರ ಅಂಜುಬುರುಕರವರು. ಉಪಾಯಾಂತರದಿಂದ ತನ್ನ ಗೆಳೆಯರ ತಂಡದಿಂದ, ಆಹ್ಲಾದ ವಿಲಾಸದ ಪ್ರಸಾದವನ್ನು ಶಾಲೆಗೆ ತರಿಸಿಕೊಳ್ಳ ತೊಡಗಿದನು. ಸಂಜೆ ಊಟವಾಗಿ ಓದಲು ಕುಳಿತನೆಂದರೆ ಮೆಲ್ಲಗೆ ಅದನ್ನು ಹೊರತೆಗೆದು ಗೆಳೆಯರ ಮುಂದಿಡತೊಡಗುವನು. ಕ್ರಮೇಣ ಅವರ ಒಲವು ಇವನ ಕಡೆಗೆ ಹರಿಯಿತು. ಒಂದು ದಿನ—"ನಿಮಗೆಲ್ಲ ಧೈರ್ಯ ವಿಲ್ಲದೆ ಹೋಯಿತು. ಇಲ್ಲದಿದ್ದರೆ ವಿಲಾಸಕ್ಕೇ ಹೋಗಬೇಕು. ಅಲ್ಲಿನ ಬಿಸಿಬಿಸಿ ತಿಂಡಿಯ ಮುಂದೆ ಈ ತಣಕಲು ತಿನ್ನುತ್ತಿರುವುದೇ"—ಎಂದನು. ಎಲ್ಲರ ಅನುಮೋದನೆಯೂ ದೊರೆಯಿತು. ಆದರೆ ತರಲು ಹೋಗುವವ ರಾರು? ತರುವುದಾದರೂ ವ್ಯವಸ್ಥಾಪಕರಿಲ್ಲದ ಗಳಿಗೆಯನ್ನು ಹುಡುಕಬೇಕಲ್ಲ. ಹುಡುಗರು ನಿದ್ದೆಹೋದುದನ್ನು ಕಂಡಹಿನಹ ಅವರು ಮಲಗುವುದಿಲ್ಲ.

ಈ ಸಂಕಟವೂ ಸೋಮಪ್ಪನ ಸೂಕ್ಷ್ಮಬುದ್ಧಿಯಿಂದ ನಿವಾರಣೆ ಯಾಗುತ್ತ ಬಂದಿತು. ಎಲ್ಲರೂ, ಎಲ್ಲರೂ ಎಂದರೆ ಎಲ್ಲರಲ್ಲ, ಸೋಮಪ್ಪನ ಕೊಟಡಿಯ ಆರು ಮಂದಿ ಬಾಲರು, ಬೇಗನೆ ಓದುಮುಗಿಸಿ ಮಲಗತೊಡಗಿ ದರು. ರಾತ್ರಿ ೧೦ ಘಂಟೆಯು ಬಾರಿಸಲು ಹಾಸ್ಟೆಲಿನ ದೀಪಗಳು ನೊಂದು ವುವು. ಸೋಮಪ್ಪನು, ಯಾವನಾದರೊಬ್ಬ ಸಹಾಯಕನನ್ನು ಕರೆದು

ಕೊಂಡು ಆಹ್ಲಾದ ವಿಲಾಸದ ಕಡೆಗೆ ಹೋಗಿ ಬೇಕಾದ ಒಡವೆಗಳನ್ನು ತರುವನು. ಬಳಿಕ ಎಲ್ಲರೂ ಹಂಚಿಕೊಂಡು ಮಲಗಿದಲ್ಲಿಂದಲೇ ಅದನ್ನು ಧ್ವಂಸಪಡಿಸುವರು. ದೀಪವಿಲ್ಲದಿದ್ದರೂ ವಾಸನೆಯು ಸುಮ್ಮನಿರುವುದೇ? ನೆರೆ ಕೊಟಡಿಯ ಒಬ್ಬ ಹುಡುಗನಿಗೆ ಎಚ್ಚರವಾಯಿತು. ಇವರ ಗುಜು ಗುಜು ಸದ್ದು ಕೇಳಿಸಿತು. ವಾಸನೆ ಬಂದಿತು. ಗುಟ್ಟು ಸಿಕ್ಕಿತೆಂದು ಹಿಗ್ಗಿನಿಂದ ಅವರ ಕೋಣೆಯೊಳಕ್ಕೆ ಕಾಲಿರಿಸಿದನು. ಸೋಮುಪ್ಪನ ಕಣ್ಣಿಗೆ ಬಿತ್ತು. ಇನ್ನು ತನ್ನ ಉಳಿಗಾಲವಿಲ್ಲೆಂದು ತಿಳಿದನು. ಅವನ ಕೈಯಲ್ಲಿನ ವಿದ್ಯುತ್ ದೀಪವು ಮಿನುಗಲು ಗುಟ್ಟು ಪೂರ್ಣ ರಟ್ಟಾಯಿತು. "ಸರ್"—ಎಂದು ಬಾಯಿತೆರೆದನು. ಅಷ್ಟರಲ್ಲಿ ಸೋಮುಪ್ಪನು ಕುಪ್ಪಳಿಸಿ ಹಾರಿ ಅವನ ಬಾಯಿಯನ್ನು ಒತ್ತಿಹಿಡಿದನು. ತಾನು ತಿನ್ನಬೇಕೆಂದು ಹಿಡಿದ ಹಲವಾ ಚೂರು ಪತ್ತೇದಾರನ ದವಡೆಯಲ್ಲಿ ಬಿದ್ದಿತು. ಏನು ಮಾಟವೋ ಏನೋ. ಪತ್ತೇದಾರನು ಸುಮ್ಮನಾಗಿ, ಅವರ ಬಳಿಗೆ ಬಂದು ಕುಳಿತನು. ಮುಂದೆ ಅವನಿಂದ ಯಾವ ತಂಟೆಯೂ ಇರಲಿಲ್ಲ.

ಸೋಮುಪ್ಪನ ಚಮತ್ಕಾರವು ಈ ವಿಷಯದಲ್ಲಿ ಇನ್ನೂ ಬಹಿರಂಗವಾಗಲಿಲ್ಲ. ಆದರೆ ಒಂದು ನಿಮಿತ್ತದಿಂದ ಮಾತ್ರ ಅವನ ತೊಂದರೆಯು ಹೆಚ್ಚಿತು. ತನ್ನೊಬ್ಬನ ಮಾತ್ರವಲ್ಲ ಈ ಸ್ನೇಹಿತರನ್ನು ಪೋಷಿಸುವ ಭಾರ ಅಧಿಕವಾಗುತ್ತ ಬಂದಿತು. ಅದರಂತೆ ಆಹ್ಲಾದ ವಿಲಾಸದ ಸಾಲವೂ ಬಳೆಯಿತು. ಮೊದಮೊದಲು, ಇಲ್ಲದ ಖರ್ಚುವೆಚ್ಚಗಳ ಹೆಸರನ್ನು ಹೇಳಿ ತಂದೆಯಿಂದ ಹಣ ತರಿಸುತ್ತಿದ್ದನು. ಜೂನು ತಿಂಗಳೊಂದರಲ್ಲಿ ಆರು ತಿಂಗಳ ಅನುಕೂಲತೆಯೂ ಆಗುತ್ತಿತ್ತು. ಆದರೆ ಈ ಬಾರಿ ಹಾಸ್ಟೆಲಿಗೆ ಸೇರಲು ಅವನ ವ್ಯವಸ್ಥಾಪಕರು ಅಡ್ಡಾಗಿ ಬಂದರು. ಅಕ್ಟೋಬರ ತಿಂಗಳು ಬರಲು, ಆಹ್ಲಾದ ವಿಲಾಸದವರ ತಗಾದೆ ಬಲವಾಯಿತು. ಉಪಾಯ ಕಾಣದೆ—ಮನೆಗೆ ಹಣಬೇಕೆಂದು ಬರೆದನು ಯಾವ ನೆಪವೆಂದು ಸೂಚನೆಯಾಗಲಿಲ್ಲ. ಕೊನೆಗೆ ಹೇಳಿದ್ದೇ ಹೆಸರೆಂದು "ಟ್ಯಾಂಟೇಬಲಿನ ಬಗ್ಗೆ ೨೦ ರೂಪಾಯಿಗಳು ಬೇಕು. ಇದಿಲ್ಲದೆ ಓದುವುದು ಸಾಧ್ಯವೇ ಇಲ್ಲ" ಎಂದು ಬರೆದುಬಿಟ್ಟನು. ಕಾಗದವು ಮನೆಗೆ ಮುಟ್ಟಲು ತಂದೆಯು, ಪುತ್ತೂರಿಗೆ ಬರುವವರ ವಶ ಅಷ್ಟು

ರೂಪಾಯಿಗಳನ್ನು ಕಳುಹಿಸಿಕೊಟ್ಟನು. ಸೋಮಪ್ಪನ ಸದ್ಯದ ತಗಾದೆ ಮುಗಿಯಿತು.

ಒಂದು ದಿನ ಸುಬ್ಬಪ್ಪನವರು ಮಗನ ವಿದ್ಯಾಭ್ಯಾಸದ ಸುದ್ದಿಯನ್ನು ವಕೀಲರೊಡನೆ ಮಾತನಾಡುವಾಗ—"ಸ್ವಾಮಿ, ನೀವು ಹೇಳಿದಿರೆಂದು ಹುಡುಗನನ್ನು ಶಾಲೆಗೆ ಹಾಕಿದೆ. ಈಗ ಖರ್ಚುನೋಡುವಾಗ ಅಂಜಿಕೆಯಾಗುತ್ತದೆ. ಮೊನ್ನೆಮೊನ್ನೆ ಟ್ಯಾಂಟೀಬಲಿಗೆಂದು ೨೦ ರೂಪಾಯಿ ಕಳುಹಿಸಿದೆ. ಇಷ್ಟು ಚಿಕ್ಕ ಮಕ್ಕಳಿಗೆ ೨೦ ರೂಪಾಯಿ ಕ್ರಯದ ಪುಸ್ತಕಗಳೆಂದರೇನು?" ಎಂದರು. ಪುಸ್ತಕದ ಹೆಸರನ್ನು ಕೇಳಿ ವಕೀಲರಿಗೆ ನಗು ಬಂದಿತು. "ಹುಡುಗನು ಸುಳ್ಳು ಹೆಸರಿನಿಂದ ನಿಮ್ಮನ್ನು ಮೋಸಮಾಡಿರಬೇಕು–ಟ್ಯಾಂಟೀಬಲ ಅಂದರೆ ಒಂದು ತುಂಡು ಕಾಗದ. ಕಾಸು ಖರ್ಚಿಲ್ಲದುದು" ಎಂದರು. ಸುಬ್ಬಪ್ಪನವರಿಗೆ ದಿಗಿಲುಬಿದ್ದಿತು. ಸೋಮಪ್ಪನು ತನ್ನನ್ನು ವಂಚಿಸಿದನಲ್ಲಾ ಎಂದು ಆಶ್ಚರ್ಯವಾಯಿತು. ನೇರಾಗಿ ಹಾಸ್ಟೆಲಿಗೆ ಹೋದರು. ಸೋಮಪ್ಪನ ಸವಾರಿ ಇಬ್ಬರು ಗೆಳೆಯರ ಜತೆಯಲ್ಲಿ ಹರಟೆ ಹೊಡೆಯುತ್ತ ಕುಳಿತಿತ್ತು. ಅಷ್ಟಕ್ಕೆ ಸುಬ್ಬಪ್ಪನು ಬಂದುದು ಕಂಡಿತು. ಅವರ ಮುಖದ ಬಿಗು ಕಂಡು ಏನೋ ಆಪತ್ತು ಬಂದಿತೆಂದು ಊಹಿಸಿದನು. ಅವರು ಬಂದವರು ತೆರೆದ ಬಾಯಿಗೇ "ಅಹುದೋ, ಸೋಮು, ಟ್ಯಾಂಟೀಬಲಿಗೆ ಎಂದು ೨೦ ರೂಪಾಯಿ ತರಿಸಿಕೊಂಡೆಯಲ್ಲ. ತೋರಿಸು ಆ ಪುಸ್ತಕ"– ಎಂದರು. ಯಾರೋ ಗುಟ್ಟು ರಟ್ಟುಮಾಡಿದನೆಂದು ಅಂಜಿದನು. ಅವನು ಕುಳಿತಲ್ಲೇ, ಮೇಜಿನ ಮೇಲೇ ಒಂದು ಗಡಿಯಾರವಿತ್ತು. ಅದನ್ನು ಕಂಡು ಅವನಿಗೊಂದು ಸೂಕ್ಷ್ಮಾಲೋಚನೆ ಹೊಳೆಯಿತು. "ಅಪ್ಪಾ, ಅದು ಪುಸ್ತಕವೆಂದು ನಾನು ಬರೆದಿದ್ದನೇ?"

"ಹಾಗಾದರೆ, ಇನ್ನೇನದು?"

"ಇದೋ ನೋಡು, ಓದುವುದಕ್ಕೆ ತೊಂದರೆಯಾಗುತ್ತದೆ ಎಂದು ಈ ಮೇಜನ್ನು, ಟ್ಯಾಂನೋಡಲು ಈ ಗಡಿಯಾರವನ್ನು ತೆಗೆದುಕೊಂಡೆ. ಮೇಜಿಗೆ ಇಂಗ್ಲಿಷಿನಲ್ಲಿ ಟೇಬಲ್ ಎಂದು ಹೆಸರು. ಕನ್ನಡದಲ್ಲಿ ಬರೆಯುವ ಬದಲು ಮರೆತು ಇಂಗ್ಲಿಷಿನಲ್ಲಿ ಟ್ಯಾಂಟೇಬಲ್ ಎಂದು ಬರೆದೆ" ಎಂದನು. ಸುಬ್ಬಪ್ಪ

ನವರ ಸಿಟ್ಟು ಶಾಂತವಾಯಿತು. ತಮ್ಮ ಗಡಿಬಿಡಿಗಾಗಿ ನಕ್ಕರು. ಸೋಮಪ್ಪ ನೂ ನಕ್ಕನು. ಅವನ ಗೆಳೆಯರೂ ನಕ್ಕರು. ಅಷ್ಟರಲ್ಲಿ ಸೋಮಪ್ಪನ ಇನ್ನೊಬ್ಬ ಗೆಳೆಯನು ಕಾಲಿಟ್ಟು—"ಸೋಮಪ್ಪ, ಆಗಿಲ್ಲವೊ ನಿನ್ನ ಸಭೆ? ನಿನ್ನ ಕೋಣೆಗೆ ಹೋಗಬಾರದೇ? ನನಗೆ ಬರೆಯುವ ಕೆಲಸವಿದೆ"—ಎಂದನು. ಸೋಮಪ್ಪಗೆ ಅವಮಾನವಾಯಿತು. ಹೊರಟೇಹೋದನು.

## ೬. ಕೊಳ್ಳುವ ಕಾಲಬರಲು.

ನಾವು ಅವನನ್ನು ಕರೆಯುತ್ತಿದ್ದುದು "ಜಾಂಬ"ವನೆಂದು. ಅವನ ಮನೆಯುವರಿಟ್ಟ ಹೆಸರು ಶಾಂಭವನೆಂದು. ತೀರ ಅಪೂರ್ವದ ಹೆಸರಲ್ಲವೆ. ಅವನೂ ತೀರ ಅಪೂರ್ವದ ಹುಡುಗನೆಂದು ಅವನ ಮನೆಯುವರು ಈ ಅಪೂರ್ವದ ಹೆಸರನ್ನು ಇರಿಸಿರಬೇಕು ಈಗಂತು ಅವನು "ಥೇಟು" ಜಾಂಬವನೇ. ವರುಷವೇನಾದರೂ ೩೫ ಇರಬಹುದು. ಕೂದಲೆಲ್ಲ ನೆರತಾಗಿದೆ. ಅಗಾಧವಾದ ಶರೀರ; ದೊಡ್ಡದೊಡ್ಡ ಕೈಕಾಲುಗಳು; ಹೊತ್ತು ಸಂಚರಿಸಲು ಕಠಿಣವಾದ ಹೊಟ್ಟೆ. ಚಿಕ್ಕವನಿರುವಾಗ ಅವನು ಹಾಗೇನೂ ಇರಲಿಲ್ಲ. ಕೈಕಾಲುಗಳು ನೀಳವಾಗಿದ್ದುವು. ನಮಗಿಂತ ಅವನು ಐದು ವಯಸ್ಸಿಗೆ ಹಿರಿಯನಾಗಿದ್ದನು. ಆದರೆ ಅವನ ಮುಖವನ್ನು ಸರಿಯಾಗಿ ನೋಡಬೇಕಾದರೆ ಕಾಲುಮಣೆಯೇ ಬೇಕಿತ್ತು.

ನಾವಾಗ ತೀರ ಚಿಕ್ಕವರಾಗಿದ್ದೆವು. ನಾವೆಂದರೆ ನಾಲ್ಕು ಮಂದಿ. ನಾನು, ನನ್ನ ಗೆಳೆಯ ವೆಂಕಪ್ಪ, ಜಾಂಬವ, ಅವನ ಚಿಕ್ಕತಂದೆ ಮಗ ಸದಾಶಿವ. ನಮ್ಮೆಲ್ಲರ ಮನೆಯು ಒಂದೇ ಊರುಕೇರಿಯಲ್ಲಿ. ಇಲ್ಲಿಂದ ಕರೆದರೆ ಅಲ್ಲಿಗೆ ಕೇಳಿಸಬೇಕು. ನಾವು ಮೂವರಿಗೆ ಅಂದರೆ ನಾನು, ವೆಂಕಪ್ಪ, ಸದಾಶಿವ-- ನಮಗೆ ಸಾಧಾರಣ ಸಮವಯಸ್ಸು, ೯-೧೦ ಇರಬಹುದು. ನಾವೆಲ್ಲ ಓದು ಕಲಿಯುತ್ತಿದ್ದೆವು. ಆದರೆ ಒಂದೇ ಶಾಲೆಯಲ್ಲ. ನನ್ನ ತಂದೆಯುವರು ನನ್ನನ್ನು ಸರಕಾರಿ ಶಾಲೆಗೆ ಕಳುಹಿಸುತ್ತಿದ್ದರು. ವೆಂಕಪ್ಪನೂ ನನ್ನ ಜತೆಯಲ್ಲಿ ಶಾಲೆಗೆ ಬರುತ್ತಿದ್ದನು. ಸದಾಶಿವ ಜಾಂಬವಂತರು ಸಂಬಳ ಕೊಡುವ ಶಾಲೆಗೆ ಬರುತ್ತಿರಲಿಲ್ಲ ಅವರು ಹೋಗುವ ಶಾಲೆಗೆ ಐಗಳಮಠವೆಂದು ಹೆಸರಿತ್ತು. ಈಗ ನಮ್ಮ ಊರಿನಲ್ಲಿ, ಏಕೆ ಇಡೀ ಜಿಲ್ಲೆಯಲ್ಲಿ, ಒಗ್ಗರಣೆಗೊಂದು ಐಗಳಮಠ ಬೇಕೆಂದರೂ ಸಿಗುವಂತಿಲ್ಲ. ಆಗ ಊರಿನ ಹೆಚ್ಚಿನ ಹುಡುಗರು ಓದುತ್ತಿದ್ದುದು ಐಗಳ ಮಠದಲ್ಲಿಯೇ. ಅಲ್ಲಾದರೆ ತಿಂಗಳುತಿಂಗಳಿಗೆ ಸಂಬಳವಿಲ್ಲ. ವರುಷ

ಕ್ಕೊಮ್ಮೆ ಐಗಳ ಮನೆಗೆ ಒಂದುನೂರು ತೆಂಗಿನ ಕಾಯಿಯನ್ನೋ, ಒಂದು ಮುಡಿ ಅಕ್ಕಿಯನ್ನೋ, ಏನಿಲ್ಲದವರು ಹತ್ತು ಹೊರೆ ಹುಲ್ಲನ್ನೋ ತಂದು ಹಾಕಿದರಾಯಿತು ನಮ್ಮ ಶಾಲೆಯಲ್ಲಿ ಪ್ರತಿ ತಿಂಗಳಿಗೂ ಎರಡೆರಡಾಣೆ ಸಂಬಳ ಕೇಳುತ್ತಿದ್ದರು. ಅದು ತೀರ ಹೆಚ್ಚೆಂದು ನಮ್ಮ ಊರ ಹಿರಿಯರ ತಿಳಿವು. ಅಂತೂ ನಮ್ಮ ಶಾಲೆಗೆ ಬರುವ ಎರಡರಷ್ಟು ಹುಡುಗರು ಮಠದಲ್ಲಿ ಓದುತ್ತಿದ್ದರು.

ನಮ್ಮ ಶಾಲೆಬಿಟ್ಟಿತು ಎಂದರೆ, ನಾವು ಓಡಿಹೋಗಿ, ನಮ್ಮೂರಿನ ಗೋಚರಾವಿನ ಬಳಿ ಕಾದು ಕುಳಿತುಕೊಳ್ಳುವೆವು. ಅಲ್ಲಿಗೆ ಜಾಂಬವ ಸದಾಶಿವರು ಬರುವರು ಒಂದೊಂದು ದಿನ ಇತರ ಹುಡುಗರೂ ಬರುವರು. ನಮ್ಮ ಸುದ್ದಿ ಅವರಿಗೆ ಹೇಳುವುದು; ಅವರ ಸುದ್ದಿ ನಾವು ಕೇಳುವುದು. ಸದಾಶಿವನು ಯಕ್ಷಗಾನ ಪ್ರಸಂಗವನ್ನು ಹಾಡುವುದನ್ನೂ, ಕುಣಿಯುವುದನ್ನೂ ಕಂಡರೆ ನನಗೆ ಮಠವೇ ಒಳಿತೆಂದು ಕಾಣುತ್ತಿತ್ತು. ಅವನಿಗೆ, ನಮ್ಮ ಶಾಲೆಯವರು ಹುಡುಗರನ್ನು ಬೇಗ ಮನೆಗೆ ಬಿಡುವುದನ್ನು ಕಂಡರೆ, ಶಾಲೆಯೇ ಒಳ್ಳೆಯದೆಂದು ಕಾಣುತ್ತಿತ್ತು.

ಒಂದು ದಿನ ನಾನು ಅಳುತ್ತ ಮನೆಗೆ ಬರುತ್ತಿದ್ದೆ. ವೆಂಕಪ್ಪನೂ ನನ್ನ ಜತೆಯಲ್ಲಿ ತುತ್ತೂರಿಬಾರಿಸುತ್ತಿದ್ದನು. ಬಯಲಿಗೆ ಬಂದು ಕುಳಿತೆವು; ಆದರೂ ನಮ್ಮ ದುಃಖವು ಶಾಂತವಾಗಲಿಲ್ಲ. ಆ ದಿನದ ಸಂಜೆ ಬಿದ್ದ ಏಟಿನ ಉರಿ ಇನ್ನೂ ಹೋಗಿರಲಿಲ್ಲ. ಅಲ್ಲಿಗೆ ಬಂದು ಕುಳಿತು ನಮ್ಮ ಸಿಟ್ಟನ್ನು ಕಾರುತ್ತ ಕುಳಿತೆವು. ಮಾಸ್ತರು — ಮಾಷ್ಟ್ರು — ಮೋಟ್ರು–ಮೋಟ್ರು–ಆಗ ಮೋಟರು ಬಂದಿರಲಿಲ್ಲ, ಬಂದಿದ್ದರೆ ಆ ಅರ್ಥ ಬರುತ್ತಿತ್ತು — ಮೊಂಟ್ರು — ಎಂದು ಕರೆದು ಕೊನೆಗೆ ಮೊಂಟ್ರು ಎಂದು ಅವರಿಗೆ ನಾಮಕರಣ ಮಾಡಿದೆವು. ಮೋಂಟ ಎಂದರೆ ಕುಂಟನೆಂದು ನಮ್ಮ ಹಳ್ಳಿಮಾತು. ಬಹುವಚನ ಕೊಟ್ಟು ಗೌರವಿಸಿ- ಮೊಂಟ್ರು–ಎನ್ನುತ್ತಿದ್ದೆವು. ಅಷ್ಟರಲ್ಲಿ ಸದಾಶಿವ ಬಂದನು. ನಮ್ಮ ಸಪ್ಪಗಿನ ಮುಖನೋಡಿ — "ಇದೇನು ಇವತ್ತು ಬೆಕ್ಕಿನಂತೆ ಮಿಣ್ಣಗಿರುವಿರಿ?" — ಎಂದನು. ನಮಗೆ ದುಃಖ ಬಂದಿತು. 'ಆ ಹಾಳಾದ ಮೋಂಟ್ರು ಹೊಡೆಯಿತು ನಮ್ಮನ್ನು' — ಎಂದೆವು. ಸದಾಶಿವಗೆ ನಮ್ಮ ಮೇಲೆ ಕನಿಕರ

ವಾಯಿತು. ಅವನು ತನ್ನ ಮಠದ ಸುದ್ದಿ ಹೇಳಿದನು. ಮೊದಲು ಮೊದಲು ನಮ್ಮ ಐಗೋಳೂ (ಐಗಳು) ಹಾಗೆಯೇ ಇದ್ದರು. ಮಾತನಾಡಿದರೆ ಸಾಕು– ಫರಂಗೀಮಣೆ, ಕೊರಡೇ ಏಟು, ಕೋದಂಡ – ಎಲ್ಲಾ ಕೊಡುತ್ತಿದ್ದರು ಎಂದನು. ಈ ಕೋದಂಡವೆಂದರೇನು ಎಂದು ಕೇಳುವ ಮನವಾಯಿತು. ಕೇಳಿದೆವು. "ಅದೇ, ಹೂಂ, ಅದನ್ನು ಏಣಿಸಿದರೆ ಮೈಜುಮ್ಮೆನುತ್ತದೆ. ಕೈಬೆರಳುಗಳನ್ನು ಹೆಣೆದು ಅದರ ಒಳಗಿಂದ ಒಂದು ಹಗ್ಗ ಸುರಿದು ಮೇಲಕ್ಕೆ ಕಟ್ಟುವುದು. ಹಾಗೆಯೇ ಒಬ್ಬನು ಅಂತರಿಕ್ಷದಲ್ಲಿ ತೂಗುತ್ತಿರಬೇಕು. ನೆಲದ ಮೇಲೆ ಕಾಲೂರಬಾರದು. ಕೈಸೋತು ಕೆಳಕ್ಕೆ ಬಿದ್ದರೆ, ಕೆಳಕ್ಕೆ ಮುಳ್ಳೆಲ್ಲಾ ನಡುವರು; ಪ್ರಾಣವೇ ಹೋದೀತು . . . . ಒಂದು ಸಾರಿ— ಜಾಂಬವಣ್ಣನಿಗೆ ಕೋದಂಡ ತೂಗಿಸಿ" ಎಂದು ಸದಾಶಿವ ನಗಲು ತೊಡಗಿ ಬಿಟ್ಟನು. ನಮಗೆ ಕೋದಂಡದ ಹೆಸರನ್ನೆ ಕೇಳಿ ಅಂಜಿಕೆಹುಟ್ಟಿತು. ಮಠವು ಬೇಡವೇ ಬೇಡವೆನಿಸಿತು. ಆದರೆ ಸದಾಶಿವನಿಗೆ ನಗು ಬಂದು ದೇಕೆಂದು ತಿಳಿಯುವ ಕುತೂಹಲವಾಗಿ—"ಅವನಿಗೆ ಕೋದಂಡ ಹಾಕಿದಾಗ ನೀನು ನಗುವುದೇ?" ಎಂದು ಕೇಳಿದೆವು.

"ನಕ್ಕುದು, ಅದಕ್ಕಲ್ಲ. ಜಾಂಬವಣ್ಣನ ಉಪಾಯಕ್ಕೆ. ಅವನು ಸಣ್ಣ ಮೂರ್ತಿಯೆಂದು ತಿಳಿದೆಯಾ? . . . . ಕೊಟ್ಟ ಎರಡು ಕ್ಷಣದಲ್ಲಿ ಹಾರಿ ಬಿದ್ದನು. ಸುದೈವದಿಂದ ಮುಳ್ಳು ನಟ್ಟ ಜಾಗ ತಪ್ಪಿತು. ಅಲ್ಲೇ ಸತ್ತೆ ನೆಂದು ಬಿದ್ದುಬಿಟ್ಟನು ಐಗಳು ಸಿಟ್ಟಿಂದ ಬಂದರು. ಜಾಂಬವಣ್ಣಗೆ ದಾತಿ(ತಿಳಿವು)ರಲಿಲ್ಲ. ಕಣ್ಣಿಗೆ ನೀರು ಚಿಮುಕಿಸಿದರು. ನಾನೂ ಕೂಗಿಬಿಟ್ಟೆ. ಅರೆಗಳಿಗೆಯಾದರೂ ಅವನು ಏಳದುದನ್ನು ಕಂಡು ಅಂಜಿಕೆಯಾಗಿ, ಮನೆಗೆ ಓಡಿಹೋಗಿ "ಅಣ್ಣನನ್ನು ಐಗಳು ಕೊಂದರು" ಎಂದು ದೂರುಕೊಟ್ಟೆ. ಅವರು ಗಾಬರಿಗೊಂಡು ಓಡಿಬಂದರು. ಇನ್ನೂ ಅಣ್ಣ ಮಲಗಿದ್ದಲ್ಲೇ. ತಾಯಿ ಬಂದು ಬೊಬ್ಬಿಟ್ಟಳು. ತಂದೆಯು ಐಗಳ ಕೈ ಹಿಡಿದು ಗದರಿಸ ತೊಡಗಿದರು. ಐಗಳಿಗೆ ಪ್ರಾಣವೇ ಹಾರಿಹೋಯಿತು. ಪುಣ್ಯಕ್ಕೆ ಅಷ್ಟರಲ್ಲಿ ಅಣ್ಣನು ಕಣ್ಣು ತೆರೆದನು. ಎಲ್ಲರ ಸಿಟ್ಟು ಶಾಂತವಾಯಿತು. ಅವನನ್ನು ಮನೆಗೆ ಒಯ್ದರು ಐದಾರು ದಿನಗಳ ವರೆಗೆ ನಾವಿಬ್ಬರೂ ಶಾಲೆಗೆ ಹೋಗ

ಲಿಲ್ಲ ನಮ್ಮ ಐಗಳ ಸೊಕ್ಕು ಮುರಿಯಿತು" ಎಂದು ಹೇಳಿದನು. "ಹಾಗೆಯೇ ಆಗಬೇಕು"—ಎಂದು ನಾವೂ ಶಪಿಸಿದೆವು. ಆಗ ಸದಾಶಿವನು ಪುನಃ ಹೇಳತೊಡಗಿದನು—"ನಿನಗೆ ಅದರ ನಿಜವಾದ ಗುಟ್ಟು ಗೊತ್ತೇ? ನನಗೂ ಅದು ತಿಳಿದಿರಲಿಲ್ಲ. ಆ ಮೇಲೆ ಅವನೇ ಹೇಳಿದನು. ಅವನಿಗೆ ಮೂರ್ಛೆಯೇ ಬಂದಿರಲಿಲ್ಲವಂತೆ! ಬೇಕೆಂದೇ ಅವರನ್ನು ಹೆದರಿಸಲು ಹಾಗೆ ಮಾಡಿದನಂತೆ!"—ಜಾಂಬವಂತನ ಬುದ್ಧಿಗೆ ಮೆಚ್ಚಿದೆವು. ಅಷ್ಟರಲ್ಲಿ ದೂರದಿಂದ ಅವನು ಬರುವುದು ಕಾಣಿಸಿತು. ನಮ್ಮ ಉಪಾಧ್ಯಾಯರಿಗೆ ಮದ್ದನ್ನರೆಯಲು ಅವನನ್ನು ಯೋಚಿಸಬೇಕೆಂದು ಯೋಚಿಸಿದೆವು. ಅವನು ಬರಲು—"ಜಾಂಬವಣ್ಣಾ, ನೀನು ಅಷ್ಟು ಬುದ್ಧಿವಂತನಾದರೆ ನಮ್ಮ ಮೇಂಟ್ರ ಸೊಕ್ಕು ಮುರಿಯಲು ಏನು ಮಾಡಬೇಕು" ಎಂದು ಕೇಳಿದೆವು. "ಏನು? ಏನು?" ಎಂದು ಅವನೂ ಕೇಳಿದನು. ಆಗ ಅಂಗಿಯನ್ನು ತೆಗೆದು ನಮ್ಮ ಬೆನ್ನನ್ನು ತೋರಿಸಿದೆವು. ಬೆತ್ತದ ದಡಿಗಳು ಕೆಂಪಾಗಿ ಮೂಡಿದ್ದವು. ಉರಿಯೆಂದರೆ ಅಷ್ಟಿಷ್ಟಲ್ಲ. ಜಾಂಬವಣ್ಣನ ಕಣ್ಣು ಕಿಡಿಕಿಡಿಯಾಯಿತು ನಾಳೆಗೇ ಮದ್ದರೆಯಬೇಕೆಂದು ನಿಶ್ಚಯವಾಯಿತು.

ಜಾಂಬವಣ್ಣನ ಹೇಳಿಕೆಯಂತೆ ನಾವಿಬ್ಬರೂ—ಮರುದಿನ ಕಾಗೆ ಕೂಗುವ ಮೊದಲೇ ಅದೇ ಬಯಲಿಗೆ ಬಂದೆವು. ಜಾಂಬವಣ್ಣನೂ ಬಂದನು. ಸದಾಶಿವ ಬರಲಿಲ್ಲ. ನಾವು ಮೂವರೇ, ಓಡೋಡಿ ಹೋದೆವು. ನಮ್ಮ ಮಾಸ್ತರರ ಮನೆಯಿಂದ ಶಾಲೆಗೆ ಒಂದು ಕಿರುದಾರಿಯಿತ್ತು. ಅಲ್ಲಿಗೆ ಅವನು ನಮ್ಮನ್ನು ಒಯ್ದನು. ಅಡಿಯಗಲದ ಕಾಲುಹಾದಿಯಲ್ಲಿ, ಒಂದು ಕುಣಿಯನ್ನು ಅಗೆಯಲು ಆಜ್ಞೆಕೊಟ್ಟು, ತಾನೀಗಲೇ ಬರುವೆನೆಂದು ಹೇಳಿ ಹೋದನು. ನಾವು ಅವನು ಬರುವುದರೊಳಗೆ ಒಂದು ಅಡಿ ಆಳ, ಅಷ್ಟೇ ಚಚ್ಚೌಕದ ಕುಣಿಯನ್ನು ತೆಗೆದು ಸಿದ್ಧಮಾಡಿದೆವು. ಅವನು ಅದರ ಮೈ ಸವರಿದಂತೆ ಮಾಡಿದನು. ನಮಗೇನೆಂದು ತಿಳಿಯಲಿಲ್ಲ. ನಮ್ಮನ್ನು ಕೆಲವು ಕಡ್ಡಿ ತರಗೆಲೆಗಳನ್ನು ತರಲು ಕಳುಹಿಸಿದನು. ನಾವು ತಂದೆವು. ಆ ಕಡ್ಡಿಗಳನ್ನು ಆ ಕುಣಿಯ ಮೇಲೆ ಅಡ್ಡವಾಗಿರಿಸಿ ಅವುಗಳ ಮೇಲೆ ತರಗೆಲೆಗಳನ್ನು ಇರಿಸಿ ಮಣ್ಣನ್ನು ಹರಡಿದನು. ದಾರಿಯು ಚಂದವಾಗಿ ಕಂ

ಡಿತು. ಜಾಂಬವಣ್ಣನು—"ಆನೆಯನ್ನು ಹೀಗೆಯೇ ಹಿಡಿಯುವರಂತೆ, ಮಳೆಯಾಲದಲ್ಲಿ—" ಎಂದನು. ಮಾಸ್ತರರು ಬರುವ ವೇಳೆಯಾದುದರಿಂದ ನಮ್ಮನ್ನು ಕರೆದುಕೊಂಡು ಸ್ವಲ್ಪ ದೂರದ ಒಂದು ಪೊದೆಯ ಬಳಿ ಹೋದನು. ನಾವು ಮೂವರೂ ಕಳ್ಳರಂತೆ ಅಡಗಿಕೊಂಡು ಏನು ಸೋಜಿಗವಾಗಲಿದೆಯೆಂದು ನಿರೀಕ್ಷಿಸತೊಡಗಿದೆವು. ದೂರದಲ್ಲಿ ಮಾಸ್ತರರ ಮುಂಡಾಸು ಕಾಣಿಸಿತು ಜಾಂಬವಣ್ಣನು ಸದ್ದಿಲ್ಲದೆ ಇರಬೇಕೆಂದು ನಮಗೆ ಅಪ್ಪಣೆಯಿತ್ತು, ತಾನು ಅಡ್ಡವಾಗಿ ತಿರುಗಿ, ಅದೇ ಹಾದಿಯಿಂದ ಅವರಿಗೆದುರಾಗಿ ನಡೆದುಬಂದನು. ಮಾಸ್ತರರು ನಮ್ಮ ಗುಟ್ಟಿನ ನೆಲಕ್ಕೆ ತೀರ ಸಮೀಪಿಸಿದರು. ಜಾಂಬವಣ್ಣನು ಅವರಿಗೆ ನಾಲ್ಕೆನಾಲ್ಕು ಮಾರು ದೂರದಲ್ಲಿದ್ದನು. ಮಾಸ್ತರರು ಭರದಿಂದ ಸಾಗುವವರು ಅಲ್ಲಿ ಕಾಲಿರಿಸಿದರು. ಶರೀರ ಮುಗ್ಗರಿಸಿತು. "ಅಯ್ಯೋ" ಎಂದು ಕಿರುಚಿ ಬಿದ್ದುಬಿಟ್ಟರು. ಜಾಂಬವಣ್ಣನು "ಏನು ಮಾಸ್ತರೆ, ಇದೇನು? ಯಾವ ದರಿದ್ರ ಹುಡುಗರಪ್ಪಾ ಈ ಕೆಲಸವನ್ನು ಮಾಡಿದವರು?"—ಎಂದು ಸಮಾಧಾನಪಡಿಸಹೋದನು. ನಮಗೆ ತಡೆಯಲಾರದ ನಗುಬಂದಿತು. ಕಿಸಕ್ಕನೆ ನಕ್ಕುಬಿಟ್ಟೆವು. ಜಾಂಬವಣ್ಣನು ಅವರ ಕೈಯನ್ನು ಹಿಡಿದು ಮೇಲಕ್ಕೆತ್ತಿದನು. ಅವರಿಗೆ ಕಾಲೂರುವುದು ಸಾಧ್ಯವಾಗಲಿಲ್ಲ. ತಿರುಗಿ ಕುಳಿತುಬಿಟ್ಟರು. ಜಾಂಬವಣ್ಣನು, ಅವರ ಕಾಲಿಗೆ ನಾಟಿದ ಹಲವೊಂದು ಮುಳ್ಳುಗಳನ್ನು ಕಿತ್ತುತೆಗೆಯತೊಡಗಿದನು. ನಮ್ಮ ಕಡೆಗೆ, ಮಾಸ್ತರರ ದೃಷ್ಟಿ ಹರಿಯಿತು. ಪ್ರಾಯಶಃ ಗುರುತೂ ತಿಳಿದುಬಂದಿರಬೇಕು. ಹಲ್ಲುಕಡಿದು, ಸುಮ್ಮನಾದರು. ಪ್ರತಿಯೊಂದು ಮುಳ್ಳನ್ನು ಕೀಳುವಾಗಲೂ 'ಅಯ್ಯೋ'—ಎಂಬ ಚೀರುವಿಕೆ ಅವರ ಬಾಯಿಯಿಂದ ಹೊರಡುತ್ತಿತ್ತು. ಜಾಂಬವಣ್ಣ ಮುಳ್ಳನ್ನು ಅದರಲ್ಲಿ ನಟ್ಟುದು ನಮಗೆ ತಿಳಿದಿದ್ದಿರಲಿಲ್ಲ ತಿಳಿದಿದ್ದರೆ ಬೇಡವೆನ್ನುತ್ತಿದ್ದೆವು. ಅದವನ ಕೋದಂಡದ ತಲೆ!

ಸರಿ. ಅಂದಿಗೆ ನಮಗೆ ಅವರ ಮೇಲಿನ ಸೇಡು ತೀರಿತು. ಆದರೆ, ಮುಂದೆ ಶಾಲೆಗೆ ಕಾಲಿಡುವ ಧೈರ್ಯವು ನಮ್ಮಿಬ್ಬರಿಗೂ ಇಲ್ಲ ನಮ್ಮ ಕಿಸುನಗೆ ಅವರ ಕಿವಿಗೆ ಬಿದ್ದಿರಬೇಕೆಂದು ತಿಳಿದಿತ್ತು. ಇನ್ನು ಶಾಲೆಗೆ ಹೋಗಬೇಕಾದರೆ ಬೆನ್ನಿಗೆ ಅಡಿಕೆಹಾಳೆಯನ್ನು ಕಟ್ಟಿಕೊಂಡು ಹೋಗಬೇಕು.

ಅಂತು ಪುಣ್ಯಕ್ಕೆ ಅವರಿಗೆ ಹೀಗಾದ ಎರಡು ವಾರದೊಳಗೆ ವರ್ಗವಾಯಿತು. ಅಲ್ಲಿಯ ವರೆಗೆ ನಾವು ಶಾಲೆಗೆಂದು ಹೊರಡುವುದು, ನಡುಹಾದಿಯಲ್ಲಿ ವೇಳೆಯಾಗುವ ತನಕ ಅಡಗಿರುವುದು. ಅಂದಿಗೆ ಆ "ಮಾರಿ" ಹೋಗಲು ಉಸ್ಸೆಂದು 'ದೇವರು ದೊಡ್ಡವನಪ್ಪಾ' ಎಂದುಕೊಂಡೆವು.

ಮೂರು ವರುಷ ಕಾಲ ಹಳ್ಳಿಯ ಶಾಲೆಯಲ್ಲಿ ಕಳೆಯಿತು. ಜಾಂಬವಣ್ಣನು ಐಗಳ ಮಠದಲ್ಲಿ ಓದುತ್ತಿದ್ದನು. ಯಾರಿಗೆ ಏನೇ ಆಗಲಿ,—ಜಾಂಬವನ ಮೈಯನ್ನು ಮಾತ್ರ ಐಗಳು ಸೋಂಕುತ್ತಿದ್ದಿರಲಿಲ್ಲ.

ಮುಂದೆ ನಮ್ಮೆಲ್ಲರಿಗೆ ಇಂಗ್ಲಿಷು ಕಲಿಯುವ ಮನವಾಗಿ ನಾವು ಹೈಸ್ಕೂಲನ್ನು ಸೇರುವ ನಿಶ್ಚಯಮಾಡಿದೆವು. ಸೇರುವಾಗ ನಾಲ್ವರೂ ಸೇರಿದೆವು. ಆದರೆ ಎರಡು ಮೂರು ವರುಷಗಳಲ್ಲಿ ವೆಂಕಪ್ಪ, ಸದಾಶಿವರು ಬಿಟ್ಟುಬಿಟ್ಟರು. ನಾವಿಬ್ಬರೇ ಅನ್ಯೋನ್ಯರಾಗಿ ಶಾಲೆಗೆ ಹೋಗತೊಡಗಿದೆವು. ಒಂದೇ ತರಗತಿ ನಮ್ಮದು. ಅಲ್ಲಿಯೂ ಜಾಂಬವಣ್ಣನ ಕೀರ್ತಿ ಮೆರೆಯತೊಡಗಿತು. ಈಗ ಶಾಲಾ ಮಾಸ್ತರರ ಬೆತ್ತವನ್ನು ಜಾರಿಸಿಡುವುದೇ ಅವನ ಕೆಲಸ. ಕೊನೆಕೊನೆಗೆ ಜಾಂಬವಣ್ಣನ ಪಿಕಲಾಟವು ತೀರ ಅಧಿಕವಾಗಿ ತೋರಿತು. ಅವನ ಹಿಂಸೆಯಿಂದ ಉಪಾಧ್ಯಾಯರು ಉಳಿಯುವುದು ಕಷ್ಟವಾಯಿತು.

ಜಾಂಬವಣ್ಣನ ಕೆಲವೊಂದು ತಂತ್ರಗಳನ್ನು ಬಣ್ಣಿಸಿದರೆ ನೀವೂ ಬೇಡವೆನ್ನಲಾರಿರಷ್ಟೆ. ಅವನಿಗೆ ತರಗತಿಯ ದಡ್ಡ ಹುಡುಗರೆಲ್ಲರೂ ನಂಟರು. ಉಪಾಧ್ಯಾಯರಿಗೆ ಯಾರು ದೂರವೋ, ಅವನಿಗೆ ಅವರು ಸಮೀಪರು. ಆದರೆ ಎದುರಿನಲ್ಲಿ ಮಾತ್ರ ಅವನಂತಹ ಸಜ್ಜನ ಬಾಲಕರಿಲ್ಲವೆನ್ನಬೇಕು.

ನಮಗೊಬ್ಬರು ಚರಿತ್ರೆಯ ಉಪಾಧ್ಯಾಯರಿದ್ದರು. ಅವರು ಹುಡುಗರನ್ನು ಗದರಿಸುವುದು ಬಹಳ. ಅವರ ಠೀವಿ ನಮ್ಮ ಜಾಂಬವಣ್ಣನಿಗೆ ಸರಿದೋರುತ್ತಿರಲಿಲ್ಲ. ಜಾಂಬವಣ್ಣನ ಮೇಲೆ ಅವರಿಗೆ ತುಂಬಾ ಪ್ರೇಮವಿತ್ತು. ಆದರೆ ಅವನಿಗೆ ಮಾತ್ರ ಅವರ ಮೇಲೆ ಅಂತರಂಗದಲ್ಲಿ ಸಿಟ್ಟು. ಜಾಂಬವಣ್ಣನ ಅಂತರಂಗದ ಮಿತ್ರರೆಂದರೆ—ಒಬ್ಬನು ವಾಸು; ಇನ್ನೊಬ್ಬನು ಶೇಷು. ನಮ್ಮ ಉಪಾಧ್ಯಾಯರು, ಲಕ್ಷ್ಮೀನಾರಾಯಣಪ್ಪನವರೆಂದು ಅವರ ಹೆಸರು,

ಈ ಮೂರ್ತಿಗಳನ್ನು ಕಂಡು ಯಾವಾಗಲೂ—"ವಾಸು; ಶೇಷು—ಸುಬ್ರ ಮಣ್ಯದ* ಜತೆಗಳೇ!" ಎನ್ನುವುದು. ಅವರೂ ಸ್ವಲ್ಪ ಪಿಕಲಾಟದ ಪ್ರಾಣಿ ಗಳು ಎಂಬುದು ನಿಜ. ಆದರೆ—ತರಗತಿಯಲ್ಲಾಗುವ ಎಲ್ಲ ಪಿಕಲಾಟ ಗಳೂ ಅವರದಲ್ಲ ಎಂಬುದು ಉಪಾಧ್ಯಾಯರಿಗೆ ಗೊತ್ತಿರಲಿಲ್ಲ. ಅವರು ಮಾಡುವ ತಂಟೆಗಳಿಗೆ, ನಮ್ಮಂಥವರ ಉಪ್ಪುಕಾರಗಳಿರುತ್ತಿದ್ದುವು. ಆದರೆ ಕಣ್ಣಿಗೆ ಸಿಕ್ಕುವ ಮೊಂಡಬುದ್ಧಿಯುವರು ಅವರೇ. ಇದರಿಂದ, ತರ ಗತಿಯಲ್ಲಿ ಸ್ವಲ್ಪ ಗದ್ದಲವಾಯಿತೆಂದರೆ, ಮೊದಲಸೆಯ ಏಟು ಸುಬ್ರಮಣ್ಯ ದವರಿಗೆ! ಅದನ್ನು ಆಕ್ಷೇಪಿಸಲು—"ಜಾಂಬವಂತ." ಅವನು ಬಾಯ್ಬಿರೆ ದರೆ—"ನಿನಗೇಕೋ ಆ ಕೋಣಗಳ ವಕಾಲತು?"—ಎಂದು ಮಾಸ್ತರರ ಹಿತೋಕ್ತಿ ಅವನಿಗೆ.

ಒಂದು ದಿನ ವಾಸು ಶೇಷುಗಳು ಮನೆಲೆಕ್ಕ ಮಾಡಿರಲಿಲ್ಲ. ಮನೆ ಲೆಕ್ಕ ಮನೆಯಲ್ಲಿ ಮಾಡಬೇಕೆಂಬ ರೂಢಿಯೇ ಅವರಿಗಿಲ್ಲ. ಚರಿತ್ರೆಯ ಉಪಾಧ್ಯಾಯರೇ ಲೆಕ್ಕಕ್ಕೂ ದೊರೆಗಳು. ಅವರ ಸಿಟ್ಟಿಗೆ ಬಲಿಯಾಗಬಾರ ದೆಂದು ಬೇಗನೆ ಶಾಲೆಗೆ ಬಂದಿದ್ದರು ನಿತ್ಯ ಬಂದು ಮಾಡುವ ಕೆಲಸವೆಂ ದರೆ, ತಮಗಿಂತ ಮೊದಲು ಬಂದ ಹುಡುಗನಿಂದ ಪುಸ್ತಕವನ್ನು ಎಳೆದು ಕೊಂಡು, ಅವನು ಬರೆದುದರ ನಕಲನ್ನು ತೆಗೆದಿರಿಸುವುದು. ಆ ದಿನ ಮಾತ್ರ ಅವರಿಗಿಂತ ಮೊದಲು ಬೇರೆಯವರು ಬಂದಿರಲಿಲ್ಲ. ನಂತರ ಬಂದ ವರಿಂದ ಪುಸ್ತಕವನ್ನು ಬೇಡಿ ಅಷ್ಟು ಕೆಲಸವನ್ನು ಮಾಡಿರಿಸಿದ್ದರು. ಸರಿ, ಘಂಟೆಯಾಯಿತು. ಲಚ್ಚಣ್ಣ ಮಾಸ್ತರರು—(ಲಕ್ಷ್ಮೀನಾರಾಯಣದ ತದ್ಭವ ವಂತೆ!) ಬಂದರು. ಬಂದವರೇ ಕುಳಿತುಕೊಳ್ಳುವ ಮೊದಲು ಸುಬ್ರಮಣ್ಯ ಗಳೇ, ನಿಮ್ಮ ಪುಸ್ತಕ ನೋಡುವಾ ಎಂದರು. ಪುಸ್ತಕ ತೋರಿಸಿದರು. "ಹೂಂ, ತಪ್ಪಿದಿರಿ. ಇಂದು"—ಎಂದು ನಗುತ್ತ ಕುರ್ಚಿಯ ಬಳಿಗೆ ಹೋಗಿ ಕುಳಿತರು. ದಢಕ್ಕೆಂದಿತು. ಉಪಾಧ್ಯಾಯರು ಕೆಳಗೆ; ಕುರ್ಚಿ ಮೇಲೆ! ಇಡೀ ತರಗತಿಗೆ ತರಗತಿಯೇ ನಕ್ಕುಬಿಟ್ಟಿತು. ಎಲ್ಲರ ಸ್ವರವನ್ನು ಮೀರಿಸುವ ಸ್ವರ ಜೋಡಿ ಭೂಪತಿಗಳದು. ಅಷ್ಟರಲ್ಲಿ ಜಾಂಬವನೂ ಬಂದನು. ಬಂದ

---

*ಜಾನುವಾರುಗಳ ಸಂತೆ ನೆರೆಯುವ ಸ್ಥಳ.

ವನೇ ನೇರಾಗಿ ಹೋಗಿ ಉಪಾಧ್ಯಾಯರ ಬಳಿಹೋಗಿ ಅವರನ್ನು ಎತ್ತಿ, ಕುರ್ಚಿಯನ್ನು ಸರಿಪಡಿಸಿ ಕುಳ್ಳಿರಿಸಿದನು. ಉಳಿದವರಿಗೆ ಅಷ್ಟು ಧೈರ್ಯ ಸಾಲದು. ಲಜ್ಜಣ್ಣ ಮಾಸ್ತರರು ಜಾಂಬವಣ್ಣನ ಮೇಲೆ ಪ್ರಸನ್ನರಾದರು. ಅವನು ಅವರ ಮುಂದೆ ಇನ್ನೂ ನಿಂತುದನ್ನು ಕಂಡು—"ಏನು ಬೇಕು?" ಎಂದು ಕೇಳಿದರು. "ತಡವಾಗಿ ಬಂದೆ ಸರ್; ನಿಂತಿರಬೇಕೇ?" ಎಂದು ಕೇಳಿದನು. ತಡವಾಗಿ ಬಂದವರು ನಿಂತಿರಬೇಕೆಂಬುದು ಲಜ್ಜಣ್ಣ ಮಾಸ್ತರ ನೇಮ ಆದರೆ ಇಂದು — "ಹೋಗು ಕುಳಿತುಕೋ" ಎಂದರು. ಈಗ, ಈ ಪಿಕಲಾಟವಾರದ್ದೆಂದು ತಿಳಿಯುವ ಉಪಾಯಮಾಡಬೇಕಾಯಿತಲ್ಲ. ಹುಡುಗರ ನಗು, ಅದರಲ್ಲಿ ವಾಸುಶೇಷುಗಳ ನಗು, ಅವರ ಕಿವಿಗೆ ಚೆನ್ನಾಗಿ ನಾಟಿತ್ತು. ಸಂಶಯವಾಯಿತು. ಆದರೂ ಮಾತನಾಡಲಿಲ್ಲ. "ಇವತ್ತು ಶಾಲೆಗೆ ಮೊದಲು ಬಂದವರಾರು?"—ಎಂದು ಕೇಳಿದರು. ಕೆಲವರು–ಸುಬ್ರಮಣ್ಯರ ಕಡೆಗೆ ಕೈ ತೋರಿಸಿದರು. ಲಜ್ಜಣ್ಣನವರ ಊಹೆಯೇ ಸರಿಯಾಯಿತು. ವಾಸುಶೇಷುಗಳೇ ಅಪರಾಧಿಗಳಾದರು. ಅವರೇ, ಮೊದಲು ಬಂದು, ಕುರ್ಚಿಯ ಕಾಲಿನ ಕೆಳಗೆ ಗೋಲಿಗಳನ್ನಿರಿಸಿ ತನ್ನನ್ನು ಕೆಡವಿದವರು ಎಂದು ನಿರ್ಣಯಿಸಿ, ಬಳಿಗೆ ಕರೆದರು. ಎಷ್ಟು ಗದರಿಸಿದರೂ ಅವರು ಮಾತ್ರ ಅಪರಾಧವನ್ನು ಒಪ್ಪಲಿಲ್ಲ. ಸರಿ, ಇಬ್ಬರೂ ಗೋಮಟೇಶ್ವರರಂತೆ ನಿಂತುಕೊಂಡರು. ಜಾಂಬವಣ್ಣನು ನನ್ನ ಬಳಿಯಲ್ಲೇ ಕುಳಿತಿದ್ದನು. "ಈ ಮಾಸ್ತರರು ಪಾಪದವರನ್ನು ದಂಡಿಸುವುದು ಅನ್ಯಾಯವಲ್ಲವೇ?" ಎಂದನು. ನನಗೆ ಆಗಲೇ ಸಂಶಯವಾಯಿತು.

ಮರುದಿನ ಉಪಾಧ್ಯಾಯರು ಬಂದವರು — "ಎಲ್ಲಿ, ಸುಬ್ರಮಣ್ಯ"ಗಳು ಎಂದು ವಿಚಾರಿಸಿದರು. ಅವರೇ ಇಲ್ಲ. ಮೊದಲು ಬಂದವರ ತಲೆಯ ಮೇಲೆ ಇಲ್ಲದ ಅಪವಾದಗಳು ಬರುವುವೆಂದು ಯೋಚಿಸಿ ಅಂದು ತಡವಾಗಿ ಬಂದರು. ಆ ದಿನ ಇನ್ನೊಂದು ಪಿಕಲಾಟ. ಉಪಾಧ್ಯಾಯರ ಕುರ್ಚಿಯೇ ಇರಲಿಲ್ಲ. ಸುತ್ತನೋಡಿದರೂ ಇಲ್ಲ. ಉಪಾಧ್ಯಾಯರ ದೃಷ್ಟಿ ಮೇಲಕ್ಕೆ ಹರಿಯಿತು. ಎತ್ತರದಲ್ಲಿ, ಮಾಡಿನ ಅಡ್ಡೆಗಳ ಮೇಲೆ ಅದನ್ನಿರಿಸಿದ್ದರು. ತಿರುಗಿ ಕೋಣಗಳನ್ನು ಕರೆದರು. "ಅದನ್ನು ತೆಗೆದು ಕೊಡಿರಿ"—ಎಂದರು.

"ಹೇಗೆ?" ಎಂದು ಕೇಳಲು "ಹೇಗೆ ಬೇಕೋ ಹಾಗೆ. ಇಲ್ಲವಾದರೆ ತಲೆ ಒಡೆಯುತ್ತೇನೆ" ಎಂದರು. ಬೇರೆ ದಾರಿ ಕಾಣದೆ ಅವರು ಚಿಕ್ಕದೊಂದು ಬೆಂಚನ್ನು ಮೇಜಿನ ಮೇಲಿರಿಸಿ ಅದನ್ನೇರಿ ಕುರ್ಚಿಯನ್ನು ಇಳಿಸಿದರು. "ಛೀ ಮಂಗಗಳೇ, ಹೀಗೆಯೇ ಅದನ್ನು ಇರಿಸಿದುದೆಂದು ಕಾಣುತ್ತದೆ"—ಅಂದರು. ಎಲ್ಲರೂ ನಕ್ಕರು. ಅದಕ್ಕೆ ಅವರು—"ಸರ್, ಇವತ್ತು ನಾವು ಬರುವಾಗಲೇ ವೇಳೆಯಾಗಿತ್ತು"—ಅಂದರು. "ಅಹುದು, ಕಾರಣ ನೀವು ಅದನ್ನಿರಿಸಿ ಆ ಮೇಲೆ ಮನೆಗೆ ಹೋಗಿರಬೇಕು." ಇಬ್ಬರ ತಲೆಗಳಿಗೂ ಮುಷ್ಟಿಪ್ರಹಾರವಾಯಿತು.

ಸಂಜೆ ಮನೆಗೆ ಹೋಗುವಾಗ ಜಾಂಬವಂತನು ನನ್ನೊಡನೆ ಹೇಳುತ್ತಾನೆ—"ನೋಡಿದೆಯೋ, ಲಚ್ಚಣ್ಣ ಮಾಸ್ತರರ ತಲೆ! ನಿನ್ನೆ, ಇವತ್ತು, ಎರಡೂ ದಿನಗಳ ಕೆಲಸ ನನ್ನದು. ಶಿಕ್ಷೆ ಯಾರಿಗೆ?"—ಎಂದು ನಕ್ಕನು. ನಾನವನನ್ನು ಖಂಡಿಸಿದೆ. "ನಿನ್ನಿಂದ ಪಾಪದವರಿಗೆ ಕುಟ್ಟಬಿದ್ದಿತಲ್ಲಾ" ಎಂದೆ. ಅವರ "ಕುಟ್ಟ ನಿಲ್ಲಿಸುವುದೆಷ್ಟರ ಕೆಲಸವೋ?"—ಎಂದು ಜಾಂಬವಣ್ಣನ ಶಪಥವಾಯಿತು. ನಾನೇಕೆ ಬಾಯಿತೆರೆದೆನೆಂತಾಯಿತು.

ಲಚ್ಚಣ್ಣಮಾಸ್ತರರ ಪ್ರೀತಿಯ ದಂಡನೆಯೆಂದರೆ ತಲೆಯಮೇಲೆ ಮುಷ್ಟಿಯಿಂದ ಚುಚ್ಚುವುದು. ಈ ಮುಷ್ಟಿ ವಿದ್ಯೆಗೆ "ಕುಟ್ಟಕೊಡುವುದೆ"ಂದು ಹೆಸರು. ಇದರ ಪರಿಚಯು ನಿತ್ಯವೂ ಶೇಷುವಾಸುಗಳಿಗೆ ತಪ್ಪಿದ್ದಿಲ್ಲ. ಅವರ ಮಿದುಳು ಸ್ವಲ್ಪ ದಪ್ಪವಂತೆ! ಇದರಿಂದ ತೆಳ್ಳಗಾಗುತ್ತದೆಂದು ಅವರ ಮತ.

ಇನ್ನೊಂದು ದಿನ, ಚರಿತ್ರೆಯ ಪಾಠ ನಡೆಯುತ್ತಿದ್ದಾಗ, ವಾಸುವಿನ ಬಾಯಿ ಆಡುತ್ತಿದ್ದುದು ಅವರಿಗೆ ಕಾಣಿಸಿತು. ವಾಸುವಿಗೆ ಹುರಿಗಡಲೆಯೆಂದರೆ ಜೀವ; ಅದನ್ನೇ ಮೆಲ್ಲುತ್ತಿದ್ದನು. ಅವನ ಕಿಸೆಯಿಂದ ಒಂದು ಪಾಲು ಶೇಷುವಿಗೂ, ಅವರಿಗೂ ಸ್ವಲ್ಪ ಮುಂದೆ ಕುಳಿತ ಜಾಂಬವಣ್ಣನಿಗೂ, ಅವನಿಂದಾಗಿ ನನ್ನ ಕಿಸೆಗೂ ಬಿದ್ದಿತ್ತು. ನಾವೂ ತಿನ್ನುತ್ತಿದ್ದೆವು. ಆದರೆ ತಿನ್ನುತ್ತಿದ್ದೆವೆಂದು ತೋರಿಸಿಕೊಳ್ಳುತ್ತಿರಲಿಲ್ಲ. ಆದರೆ ಹುರಿಗಡಲೆಯಲ್ಲೊಂದು ಕಲ್ಲು ಸೇರಿ "ಕಟುಂ" ಸದ್ದಾಯಿತು; ಎಲ್ಲರೂ ನಕ್ಕುಬಿಟ್ಟರು. ಲಚ್ಚಣ್ಣ ಮಾಸ್ತರರು ನೆಟ್ಟಗೆ ಬಂದು ವಾಸುವಿನ ಕಿವಿ ಹಿಡಿದು ನಿಲ್ಲಿಸಿದರು. ಕಿಸೆಯ ಶೋಧನೆ

ಯಾಯಿತು. ಇನ್ನೂ ಹುರಿಗಡಲೆ ದಾಸ್ತಾನು ಉಳಿದಿತ್ತು. ರಪ್ಪನೆ ತಲೆಯ ಮೇಲೆ ಕುಟ್ಟಿಯೇರಿಸಿದರು. ಏರಿಸಿದ ಆವೇಗಕ್ಕೆ ಸರಿಯಾಗಿ "ಅಯ್ಯೋ" ಎಂಬ ಧನಿಯೂ ಕೇಳಿಸಿತು. ವಾಸುವು ಕೂಗಿದನೆಂದು ನಾನು ತಿಳಿದೆ. ಆದರೆ ನೋಡುತ್ತೇವೆ— ಉಪಾಧ್ಯಾಯರ ಕೈಗೆ ವಾಸುವಿನ ಟೋಪಿ ಅಂಟತ್ತು. ಇದರ ಚಮತ್ಕಾರ ನನಗೆ ತಿಳಿಯಲಿಲ್ಲ! ಜಾಂಬವಣ್ಣನು ಎದ್ದು ನಿಂತನು. ಅವರ ಕೈಗೆ ಅಂಟದ್ದ ಟೊಪ್ಪಿಯನ್ನು ಎಳೆದುತೆಗೆದನು. ಟೊಪ್ಪಿಗೆ ನಾಟಸಿದ ಗುಂಡುಸೂಜಿಯೊಂದು ಅವರ ಕೈಗೆ ನಾಟತ್ತು. ಅದರ ನೋವಿಗೆ ಲಚ್ಚಣ್ಣನವರೇ ಕೂಗಿದುದಂತೆ! ಸರಿ, ವಾಸಣ್ಣನನ್ನು ತರಗತಿಯಿಂದ ಹೊರಕ್ಕಟ್ಟದರು. ನನಗೆ ತಿಳಿಯಿತು: —ಇದು "ಕೋದಂಡ" ಕೆಲಸವೆಂದು. ಸಂಜೆ ಅವನನ್ನು ಕೇಳಿದೆ: "ನಿನ್ನ ಪಿಕಲಾಟವಲ್ಲವೇ?" – ಎಂದು. ಅದಕ್ಕ ವನು ಅಲ್ಲವೆನ್ನುವನೇ? ಬದಲು ಆ ರಚನೆಯ ವಿಸ್ತಾರವನ್ನು ಬಣ್ಣಿಸಿದನು. ವಾಸುವಿನ ನುಣ್ಣಗಿನ ತಲೆಯುವೇಲೆ ಒಂದು ತಾಮ್ರದ ನಾಣ್ಯವನ್ನು ಇರಿಸಿ, ಅದರ ಮೇಲೆ ಗುಂಡುಸೂಜಿಯನ್ನು ನೆಟ್ಟಗೆ ನಿಲ್ಲಿಸಿ ಟೊಪ್ಪಿಯಿರಿಸಿದ್ದನು. ಏಟನ ಭರಕ್ಕೆ ಗುಂಡುಸೂಜಿಯು ತಲೆಯನ್ನು ಗಾಯಪಡಿಸದಂತೆ ನಾಣ್ಯದ ಚೂರು!

ಅಂತು ಆಗಿನ ದಿನಗಳಲ್ಲಿ ನಮಗೆ ಇವನ್ನೆಲ್ಲಾ ಕಂಡು ನಗುವಿನ ಹಬ್ಬ.

ಎಲ್ಲಾದರೊಮ್ಮೆ ಲಚ್ಚಣ್ಣ ಮಾಸ್ತರರು ವಾಸುವಿನ ಕಿಸೆಯನ್ನು ಶೋಧಿಸಲು ಹೋಗುವುದುಂಟು. ಅವನು ತಪ್ಪದೆ ಹುರಿಗಡಲೆ ಶಾಲೆಗೆ ತರುವನೆಂಬುದು ಗೊತ್ತು. ಒಂದು ದಿನ ಅದಕ್ಕಾಗಿ ಅವನ ಕಿಸೆಗೆ ಕೈತುರುಕಿದರು. ತುರುಕುವುದರೊಳಗಾಗಿ, ಜಾಂಬವಣ್ಣಗೆ ನಗುಬಂದಿತು ಏಕೆಂದು ನನಗೆ ತಿಳಿಯಲಿಲ್ಲ. ಅಲ್ಲಿ ನೋಡುವಾಗ, ಉಪಾಧ್ಯಾಯರ ಬೆರಳ ತುದಿಯನ್ನು ಕಚ್ಚಿಕೊಂಡು ಒಂದು ಅಳಿಲಮರಿ ಹೊರಕ್ಕೆ ಬಂದಿತು. ಲಚ್ಚಣ್ಣನವರ ಗಮನವೀಗ ಜಾಂಬವಣ್ಣನ ಕಡೆಗೆ ಹರಿಯಿತು. ವಾಸಣ್ಣನನ್ನು ಗದರಿಸಲು. ಅವನೆಲ್ಲಾ ಪಿಕಲಾಟದ ಮಂತ್ರಾಲೋಚನೆಯು ಜಾಂಬವಣ್ಣನದೇ ಎಂದು ಹೊರಬಿದ್ದಿತು. ಲಚ್ಚಣ್ಣ ಮಾಸ್ತರರು— "ಏ ಜಾಂಬವಾ"—

ಎಂದರು. ಅಲ್ಲಿಯ ತನಕ ಜಾಂಬವಣ್ಣನು ಇಂಥ ಗೂಬೆಯೆಂದು ಉಳಿದವರಿಗೆ ತಿಳಿದಿರಲಿಲ್ಲ......

ಅಂತು ಜಾಂಬವಣ್ಣ ಮೆಟ್ರಿಕ್ಯು ಮುಗಿಸಿ ಮುಂದಕ್ಕೆ ಹೋದ. ಮುಂದೆ ಬಿ. ಎ. ಆಯಿತು. ಸುದೈವಕ್ಕೆ ಸರಿಯಾಗಿ ಅದೇ ಶಾಲೆಯಲ್ಲಿ ಮಾಸ್ತರಿಕೆಯಾಯಿತು. ಆಗ ಮುಖ್ಯ ಉಪಾಧ್ಯಾಯ ಪದವಿಗೆ ಲಚ್ಚಣ್ಣ ಮಾಸ್ತರರೇ ಬಂದಿದ್ದರು. ತಮ್ಮ ಶಿಷ್ಯನು ತಮ್ಮ ಶಾಲೆಗೆ ಬಂದುದನ್ನು ಕಂಡು ಅವರಿಗೆ ಆನಂದವಾಯಿತು ಆದರೆ ಕೆಲಸವಾದ ಮೂರು ತಿಂಗಳಿನಲ್ಲಿಯೇ ಜಾಂಬವಣ್ಣ ಮಾಸ್ತರಿಕೆ ಬಿಟ್ಟು ಬೇರೆ ಉದ್ಯೋಗಕ್ಕೆ ಕೈಹಚ್ಚಿದನು. ನಾನವನನ್ನು ಆಗ ಭೇಟಿಯಾಗಿದ್ದೆ. "ಅದೇಕೆ ಹೀಗೆ ಮಾಡಿದೆಯೋ" ಎಂದು ಕೇಳಿದಾಗ ನಗುತ್ತ ಚಿಕ್ಕೊಂದು ಕಥೆ ಹೇಳಿದನು.

ಮಾಸ್ತರಿಕೆಯಾಗಿ, ನಾಲ್ಕನೆ ತರಗತಿ(iv)ಗೆ ಉಪಾಧ್ಯಾಯನೆನಿಸಿದನು. ಲಚ್ಚಣ್ಣ ಮಾಸ್ತರರ ಪಾಠವೇ ಅವನಿಗಿತ್ತು ಚರಿತ್ರೆ ಮತ್ತು ಲೆಕ್ಕಗಳಂತೆ. ಲಚ್ಚಣ್ಣ ಮಾಸ್ತರರು ಚರಿತ್ರೆ ಕಲಿಸುವಾಗ ನಮಗೆಲ್ಲ ತೂಕಡಿಕೆ ಬರುತ್ತಿದ್ದಂತೆ ಇವನ ಕಾಲದಲ್ಲಿಯೂ ಅವನ ಶಿಷ್ಯರಿಗೆ ನಿದ್ರೆ ಬರುತ್ತಿತ್ತಂತೆ! ಹುಡುಗರು ಮೆಲ್ಲನೆ ಕದ್ದು ನಸ್ಯ ಸೇದುತ್ತಿದ್ದರಂತೆ! ಅದು ಜಾಂಬವಣ್ಣನಿಗೆ ಸರಿಹೋಗಲಿಲ್ಲವಂತೆ. ಅಷ್ಟಕ್ಕೆ ನಾನು, "ನೀನೇ ನಸ್ಯ ಎಳೆಯುತ್ತಿ, ಅವರು ಎಳೆದರೇನು" — ಅಂದೆ ಚೇಷ್ಟೆಗೆ. ಅದಕ್ಕವನು -- "ಸುಮ್ಮನಿರು. ಕಥೆಕೇಳು" ಅಂದನು. ಕೇಳತೊಡಗಿದೆ. ಹೇಳತೊಡಗಿದನು: "ನಿತ್ಯವೂ, ನಸ್ಯ ಎಳೆಯುವ ಹುಡುಗರ ಮೇಲೆ ಕಣ್ಣಿಡತೊಡಗಿದೆನು. ಒಂದೆರಡು ಬಾರಿ, ಅವರ ಕಿಸೆಗೂ ಕೈಹಾಕಿದೆ ಲಚ್ಚಣ್ಣನವರು ಹುರಿಕಡಲೆ ಶೋಧನೆಮಾಡಿದಂತೆ! ಒಂದು ದಿನ ಒಬ್ಬನ ಕಿಸೆಯಲ್ಲಿ ಒಂದು ಸೀಸೆ ನಸ್ಯ ದೊರೆಯಿತು. ಅದನ್ನು ಕಿತ್ತುತಂದು ನನ್ನ ಕಿಸೆಯಲ್ಲಿರಿಸಿಕೊಂಡೆ ಪಾಠವಾಗಲು ಆ ಹುಡುಗನು ನನ್ನ ಬಳಿಗೆ ಬಂದು — 'ಸೀಸೆಕೊಡಿ ಸರ್. ಇನ್ನು ಶಾಲೆಗೆ ತರುವುದೂ ಇಲ್ಲ. ಸೇದುವುದೂ ಇಲ್ಲ' — ಎಂದು ಕೇಳಿದನು. ಆದರೆ ನಾನು ಕೊಡಲಿಲ್ಲ. ಗದರಿಸಿ ಕಳುಹಿಸಿದೆನು. ನಂತರದ ಪಾಠದಲ್ಲಿ ವಿರಾಮವಿತ್ತು. ಲಚ್ಚಣ್ಣ ಮಾಸ್ತರ ಕೋಣೆಗೆ ಹೋಗಿ ಮಾತನಾಡುತ್ತ ಕುಳಿತೆ. ನಸ್ಯ

ಎಳೆಯುವ ಮನಸ್ಸಾಗಿ, ನನ್ನ ಸೀಸೆಯನ್ನು ತೆಗೆದೆ. ಅದರಲ್ಲಿ ಹುಡಿ ಇದ್ದಿರಲಿಲ್ಲ. ಆಗ, ಆ ಹುಡುಗನ ನಸ್ಯದ ಡಬ್ಬಿಯ ನೆನಪಾಯಿತು. ಅದನ್ನು ಹೊರತೆಗೆದು — ಒಂದು 'ಚಿಮುಟ' ನಸ್ಯ ಸೊಳ್ಳೆಗೇರಿಸಿದೆನು. ತಲೆತಿರುಗಿ ಕಣ್ಣು ಕತ್ತಲೆ ಕಟ್ಟಿತು. ಲಚ್ಚಣ್ಣ ಮಾಸ್ತರರು ಗಾಬರಿಯಾದರು. ಸ್ವಲ್ಪ ಚೇತನ ಬರಲು — ಏನೆಂದು ನೋಡುತ್ತೇನೆ — ಡಬ್ಬಿಯಲ್ಲಿ ನಸ್ಯವಿದ್ದಿರಲಿಲ್ಲ! ಮೆಣಸಿನಕಾಯಿ ಪುಡಿಯಿತ್ತು!! ನಕ್ಕುಬಿಟ್ಟೆ. ಲಚ್ಚಣ್ಣ ಮಾಸ್ತರರೂ ನಕ್ಕುಬಿಟ್ಟರು. 'ಜಾಂಬು, ಇದು ಕೊಳ್ಳುವ ಕಾಲ' — ಅಂದರು. ಮತ್ತಷ್ಟು ನಕ್ಕುಬಿಟ್ಟೆ. ನನಗೇ ನನ್ನ ಮಾಸ್ತರಿಕೆ ಕಂಡು ಬೇಸರವಾಯಿತು. ಶಾಲೆಯನ್ನು ಬಿಟ್ಟುಬಿಟ್ಟೆ."



## ೭. ಶಾಂತಾರಾಮ.

ಶಾಂತಾರಾಮನೆಂದು ಅವನ ಹೆಸರು. ಹೆಸರು ಹಾಗಿದ್ದರೂ ಅದಕ್ಕೆ ತಕ್ಕಂತೆ ಅವನಿರಲಿಲ್ಲ. ಹೆಸರಿಗೆ ತಕ್ಕಂತೆ ಇರುವವರು ಅತಿ ವಿರಳ. ಅದರಲ್ಲೂ ಶಾಂತಾರಾಮ ತಕ್ಕಂತೆ ಇರುವ ಬದಲು ಪ್ರತಿ ವಿರೋಧವಾಗಿಯೇ ಇದ್ದನು. ಶಾಂತಿಯ ಬದಲು ಸಿಟ್ಟಿನ ಅವತಾರವೇ ಅವನು. ಇತರರ ಸಿಟ್ಟು ಮೂಗಿನ ತುದಿಯಲ್ಲಿದ್ದರೆ ಇವನ ಸಿಟ್ಟು ಅದಕ್ಕೂ ಒಂದು ಮೊಳ ಮುಂದಿತ್ತು. ಇತರರು ಮಾತನಾಡಿಸಿದ ಬಳಿಕ ಸಿಟ್ಟಾಗುವರಾದರೆ, ಇವನು ಅದರ ಪೂರ್ವದಲ್ಲೇ ರೇಗುವನು. ಇದಕ್ಕೆಲ್ಲ ಕಾರಣ ವಿಶೇಷವಿಲ್ಲ. ಶಾಂತಾರಾಮನು ಇತರ ಬಾಲಕರಂತಲ್ಲ. V ಫಾರ್ಮಿನಲ್ಲಿ ಅವನ ಸಹಪಾಠಿಗಳು ಮೂವತ್ತಕ್ಕೆ ಮಿಕ್ಕಿ ಇರುವರು. ಆದರೆ ಅವರೊಬ್ಬರಿಗೂ ಇವನ ಬುದ್ಧಿ ವಿಶೇಷವಿಲ್ಲ. ಎಲ್ಲರಿಗೂ ಒಂದು ಲೆಕ್ಕವನ್ನು ಮಾಡಲು ಒಂದು ತಾಸು ಹಿಡಿದರೆ ಶಾಂತಾರಾಮನು ಒಂದೇ ಒಂದು ನಿಮಿಷದಲ್ಲಿ ಮಾಡುವನು. ಲೆಕ್ಕವೊಂದೇ ಅಲ್ಲ; ಉಳಿದ ಪಾಠಗಳ ವಿಚಾರದಲ್ಲಿಯೂ ಹಾಗೆಯೇ. ಇದರಿಂದ ಅವನಿಗೆ ಸರ್ವತ್ರ ವಿಜಯವೇ ಇತ್ತು. ಶಾಲೆಯ ತಾರ್ಕಿಕ ಸಭೆಯಲ್ಲಿ, ಇವನಿಂದ ಮೇಲಿನ ತರಗತಿಯವರೂ, ಕೀಳು ತರಗತಿಯವರೂ ಭಾಗಿಗಳಾಗುತ್ತಿದ್ದರು. ಆದರೆ ಶಾಂತಾರಾಮನ ಇದಿರಾಗಿ ಮಾತನಾಡುವವರಿಗೆ ಧೈರ್ಯವು ಕುಂದುತ್ತಿತ್ತು. ಎಲ್ಲಿಂದೆಲ್ಲ ಅವನು ಪ್ರಮಾಣಗಳನ್ನು ತರುವನೆಂದು ಯಾರೂ ಊಹಿಸರು. ಅವನ ಓದೂ ವಿಶಾಲವಾದುದು. ಅವನು ತಿರುವಿಹಾಕದ ವಿಷಯವಿಲ್ಲ.

ಅದೊಂದು ವಾರದಲ್ಲಿ, ಅವನ ತಾರ್ಕಿಕ ಸಭೆಯವರು—"ಆರ್ಯರು ಕಾಡುಜನರೇ?" ಎಂಬ ವಿಚಾರವನ್ನು ತರ್ಕಿಸುವುದಾಗಿ ನಿಶ್ಚಯಿಸಿದರು. ಹಲವು ಬಾಲಕರು "ಆರ್ಯರು ನಾಗರಿಕರು" ಎಂಬ ವಿಚಾರದಲ್ಲಿ ಮಾತನಾಡಲು ನಿಶ್ಚಯಿಸಿದರು. ಅವರಲ್ಲೊಬ್ಬನು ತನ್ನ ಪಕ್ಷವನ್ನು ನಿರ್ಧರಿಸುವ

ಮೊದಲು ಶಾಂತಾರಾಮನ ಬಳಿಗೆ ಬಂದು—“ಶಾಂತಾರಾಮಾ” ಎಂದು ಕರೆದನು. ಕರೆದವನ ಹೆಸರು ಕಿಟ್ಟು ಎಂದು. ಕಿಟ್ಟುಗಳು ಎಲ್ಲೆಲ್ಲೂ ಹೀಗೆಯೋ ಏನೋ; ಕಿರುಕಳ ಬಹಳ. ಕಿಟ್ಟುವಿನ ಕರೆಗೆ ಬದಲಾಗಿ, ಶಾಂತಾರಾಮನು ಆರ್ಭಟಿಯಿಂದ–“ಏನು?” ಎಂದು ಕೇಳಿದನು. ಕಿಟ್ಟುವು ಮತ್ತಷ್ಟು ಸ್ವರತಗ್ಗಿಸಿ—“ನಾಡಿದ್ದು ವಾಗ್ವಾದವಿದೆಯಲ್ಲ”— ಎಂದನು.

“ಇರಬಾರದೇ?”

“ಅಲ್ಲ, ನೀನಾವ ಪಕ್ಷವನ್ನು ವಹಿಸುವೆ?”

“ಅದು ನಿನಗೇಕೆ?”

“ಹೇಳಬಾರದೇನೋ?”

“ಹೇಳಬಾರದೇನು?” ಅನ್ನುವಾಗ ಕಿಟ್ಟುವಿನ ಸ್ವರ ಗಂಟಲೊಳಗೇ ಇಂಗಿತ್ತು. ಆದರೆ ಶಾಂತಾರಾಮನು ಘರ್ಜಿಸಿ “ಯಾವುದಾದರೆ ನಿನಗೇನು? ಆ ದಿನ ತಿಳಿಯುತ್ತದೆ”—ಎಂದನು. ಕಿಟ್ಟುವು ಆ ವಾಗ್ವಾದದಲ್ಲಿ ಮಾತನಾಡಲೇ ಬೇಕೆಂದು ಅವನ ಉಪಾಧ್ಯಾಯರು ಗದರಿಸಿದ್ದರು. ಆದರೆ ಅವನಿಗೆ ಸೋತವರ ಪಕ್ಷವನ್ನು ಸೇರುವ ಮನವಿರಲಿಲ್ಲ ಶಾಂತಾರಾಮನ ಪಕ್ಷ ಗೆಲುವುದು ನಿಜವೆಂದು ನಿಶ್ಚಯವಾಗಿ ತಿಳಿದಿದ್ದನು. ಅದಕ್ಕಾಗಿ ಇಷ್ಟೆಲ್ಲಾ ಸಾಹಸ. ಆದರೆ ಶಾಂತಾರಾಮನ ಬಾಯಿಗೆ ಬೀಗಮುದ್ರೆ. ಕಿಟ್ಟುವು ಹಟವಾದಿ. ಒಂದು ತಾಸಿನ ವರೆಗೆ ಅವನ ಬೆನ್ನು ಬಿಡಲಿಲ್ಲ. ಯಾವಾವ ಸುದ್ದಿ ತೆಗೆಯುತ್ತ ಕುಳಿತನು. “ಶಾಂತಾರಾಮ, ಮೊನ್ನಿನ ಸಭೆಯಲ್ಲಿ ನಿನ್ನ ಆರ್ಭಟಿಯನ್ನು ಕೇಳಿ ನಿನ್ನನ್ನು ವಿರೋಧಿಸಿದ ಸುಬ್ಬಣ್ಣ ಮಾಸ್ತರರೂ ಸಹ ಬೆಪ್ಪಾದರು.” “ಶಾಂತಾರಾಮ, ಈ ಸಾರಿ ಉಪಾಧ್ಯಾಯರನ್ನುತ್ತಿದ್ದರು: ಕ್ರಿಕೆಟ್ ತಂಡಕ್ಕೆ ನಿನ್ನನ್ನೇ ನಾಯಕನನ್ನಾಗಿ ಮಾಡಬೇಕೆಂದು.” “ಶಾಂತಾರಾಮ, ಇದೊಂದನ್ನು ಕೇಳಿದೆಯಾ? ನಿನ್ನ ಭಾಷಾಂತರದ ಪುಸ್ತಕವನ್ನು ತೆಗೆದುಕೊಂಡು, ಮಾಸ್ತರರು ಪ್ರತಿಯೊಬ್ಬ ಉಪಾಧ್ಯಾಯರಿಗೂ ತೋರಿಸುತ್ತಿದ್ದರು!”— ಹೀಗೆಯೇ ತುಸುಹೊತ್ತು ಗಾಳಿತುಂಬಿದ ಮೇಲೆ ಮೆಲ್ಲಗೆ “ಶಾಂತಾರಾಮ, ಈ ಸಾರಿಯ ಸಭೆಯಲ್ಲಿ ನೀನು ಕೊನೆಗೆ ಮಾತನಾಡಬೇಕು. ಯಾವ ಪಕ್ಷವೆಂದು ಒಬ್ಬರಿಗೂ ತಿಳಿಯಬಾರದು. ಯಾವ ಪಕ್ಷ ಮಾತನಾಡುತ್ತಿ ಹೇಳು”—

ಎಂದನು. ಶಾಂತಾರಾಮನು ಹಿಗ್ಗಿನಿಂದ “ಆರ್ಯರು ನಾಗರಿಕರು–ಎಂಬ ಪಕ್ಷವನ್ನು ಹಿಡಿದು”—ಎಂದುತ್ತರವಿತ್ತನು.

ಕಿಟ್ಟುವು, ಗೆಲವಾಯಿತೆಂದು, ತನ್ನ ಪಕ್ಷವೂ ಅದೇ ಎಂದು ನಿರ್ಧರಿಸಿದನು. ಮೆಲ್ಲನೆ ಒಬ್ಬಿಬ್ಬರೊಡನೆ ಶಾಂತಾರಾಮನ ಪಕ್ಷವೂ ಅದೇ ಎಂಬ ಸುದ್ದಿ ತಿಳಿಸಿದನು. ವಿರುದ್ಧ ಪಕ್ಷವನ್ನು ವಹಿಸಬೇಕೆಂದು ನಿರ್ಣಯಿಸುವವರು ಸಹ ತಮ್ಮ ಯೋಚನೆಯನ್ನು ಬದಲಿಸಿದರು.

ವಾಗ್ವಾದದ ದಿನ ಬಂದಿತು. ಎಲ್ಲ ತರಗತಿಯವರೂ ಬಂದು ನೆರೆದರು. ಉಪಾಧ್ಯಾಯವರ್ಗವು ಬಂದಿತು. ಅವರನ್ನು ಹಿಂಬಾಲಿಸಿಕೊಂಡೇ ಶಾಂತಾರಾಮನು ಬಂದನು. ಅವನನ್ನು ಕಂಡು ಮುಂದೆ ಕುಳಿತಿದ್ದ ಬಾಲಕರು, ಸ್ವಲ್ಪ ಸರಿದು ಸ್ಥಳಮಾಡಿಕೊಟ್ಟರು. ಆದರೆ, ಅಲ್ಲಿಗೆ ಅವನು ಹೋಗದೆ, ಇನ್ನೊಂದು ಕಡೆ ಹೋಗಿ ಕುಳಿತನು. ವಾಗ್ವಾದವು ತೊಡಗಿತು. ಹಲವರು ಮಾತನಾಡಿದರು. ಆಡಿದ್ದನ್ನೇ ಆಡಬೇಕಾದೀತೆಂಬ ಅಂಜಿಕೆಯಿಂದ, ಕಿಟ್ಟು, ಆಗಾಗ ಶಾಂತಾರಾಮನ ಮೋರೆಯನ್ನು ನೋಡುತ್ತ, ತನ್ನ ಉಪನ್ಯಾಸವನ್ನು ತೊಡಗಿದನು. ಮಾತನಾಡುತ್ತ ಆಡುತ್ತ ಆವೇಶ ಹೆಚ್ಚಿತು. ಉಪಸಂಹಾರಮಾಡುವ ಗಡಿಬಿಡಿಯಲ್ಲಿ, ಆರ್ಯರೇ ಶ್ರೇಷ್ಠರು ಎನ್ನುವುದನ್ನು ಮರೆತು—“ಮಾಂಸಾಹಾರವು ಹಾನಿಕರವು” ಎಂದು ಆರ್ಭಟಿಸಿ ಕೆಳಕ್ಕಿಳಿದನು ಹುಡುಗರೆಲ್ಲಾ ಕೈಚಪ್ಪಾಳೆ ಹೊಡೆದರು. ಐದು ನಿಮಿಷಗಳ ತನಕ ಗುಲ್ಲು ನಿಲ್ಲದಾಯಿತು. ಕಿಟ್ಟುವು, ತನ್ನ ಭಾಷಣದ ಪ್ರಶಂಸೆಗಾಗಿ, ಇಷ್ಟು ಉತ್ಸಾಹವೆಂದು ತಿಳಿದನು. ವಾಗ್ವಾದದ ಅವಕಾಶದಲ್ಲಿ ಯಾರೂ ಮಾತನಾಡಬಾರದೆಂಬ ನಿಯಮವಿದ್ದುದರಿಂದ, ಕಿಟ್ಟುವಿನ ಮೂರ್ಖತೆಯನ್ನು ಯಾರೂ ಅವನಿಗೆ ತಿಳಿಸಲಿಲ್ಲ.

ಕಿಟ್ಟುವು ಹಿಗ್ಗಿನಿಂದ ಮರಳಿಬಂದು ಕುಳಿತುಬಿಟ್ಟನು. ಉಳಿದವರನೇಕರು ಮಾತನಾಡಿದರು. ಒಬ್ಬಿಬ್ಬರು ಹಿರಿಯರೂ ಮಾತನಾಡಿದರು. “ಆರ್ಯರು ನಾಗರಿಕರಲ್ಲ” ಎಂದು ಖಂಡನೆಯ ಮಾರ್ಗವನ್ನು ಹಿಡಿದ ಹುಡುಗನ ರಕ್ಷಣೆಗೆ ಯಾರೂ ಬರಲಿಲ್ಲ. ಈಗ ಶಾಂತಾರಾಮನ ಸರದಿ ಬಂದಿತು. ಕಿಟ್ಟು ಕೈಚಪ್ಪಾಳೆ ತೊಡಗಿದನು. ಎಲ್ಲರೂ ಮರುಧ್ವನಿ

ಗೊಟ್ಟರು. ಶಾಂತಾರಾಮನು ತೆರೆದ ಬಾಯಿಗೇ "ಮಾಂಸಾಹಾರವು ಶ್ರೇಷ್ಠವಲ್ಲ, ಹಾಗೆಯೇ ಆರ್ಯರು ಶ್ರೇಷ್ಠರಲ್ಲ"— ಎಂದನು. ಎಲ್ಲರೂ ಕಿಟ್ಟುವನ್ನು ಕಂಡು ಕಿಲಕಿಲನೆ ನಕ್ಕರು. ಕಿಟ್ಟುವಿಗೆ ಏಕೆಂದು ತಿಳಿಯದೆ ಗಡಿಬಿಡಿಯಾಯಿತು. ಇತ್ತ ಶಾಂತಾರಾಮನ ಉಪನ್ಯಾಸವು ತನಗೆ ವಿರುದ್ಧವಾಗಿದ್ದಿತೆಂದು ತಿಳಿದು ಕಿಡಿಕಿಡಿಯಾದನು. ಅವನು ಆ ರೀತಿ ತನ್ನನ್ನು ವಂಚಿಸುವನೆಂದು ತಿಳಿದಿರಲಿಲ್ಲ. ಅವನ ಇಡೀ ಭಾಷಣವು ಕಿಟ್ಟು ವಿಗೆ ವಿರುದ್ಧವಾಗಿತ್ತು. ಕಿಟ್ಟುವಿನ ಪ್ರತಿ ಪ್ರಮಾಣವನ್ನೂ ಅವನು ಖಂಡಿಸಿ ದನು. ಸರಿ, ಅವನ ಉಪನ್ಯಾಸದ ಬಳಿಕ ಪ್ರತಿವಾದಿಯು ಮಾತನಾಡುವು ದಿತ್ತು. ಅವನೇ ಮುಂದೆ ಬರಲಿಲ್ಲ. ಮತ ತೆಗೆದರೆ ಶಾಂತಾರಾಮನ ಪಂಗಡವೇ ವಿಜಯಗೊಂಡಿತು. ಅಂದಿನಿಂದ ಕಿಟ್ಟುವಿಗೂ ಶಾಂತಾರಾಮ ನಿಗೂ ಅಷ್ಟಕ್ಕಷ್ಟೆ.

ಆ ದಿನ ಖಂಡನೆಮಾಡಿದವನ ಹೆಸರು ಅಬ್ದುಲ್‌ನೆಂದು, ಅವನು ಶಾಂತಾರಾಮನ ಸಹಪಾಠಿ. ಖಂಡನೆಗೆ ಅಷ್ಟೊಂದು ಆಧಾರಗಳು ಇದ್ದು ವೆಂದು ಅವನು ತಿಳಿದಿರಲಿಲ್ಲ. ಅದಕ್ಕಾಗಿ ಸಭೆಯು ವಿಸರ್ಜನೆಯಾದೊಡ ನೆಯೇ ಶಾಂತಾರಾಮನ ಬಳಿಗೆ ಹೋದನು. ಶಾಂತಾರಾಮನು ಉಳಿದ ಗೆಳೆಯರನ್ನು ಸೇರದೆ, ಉಪಾಧ್ಯಾಯರ ಹಿಂದೆ ಸಾಗುತ್ತಿದ್ದನು. ಅವನನ್ನು ಅಬ್ದುಲನೂ ಹಿಂಬಾಲಿಸಿದನು. ಬಲುದೂರ ಹೋದ ಬಳಿಕ ಉಪಾಧ್ಯಾ ಯರು ಅದೃಶ್ಯರಾಗಲು, ಅಬ್ದುಲನು ಶಾಂತಾರಾಮನ ಮೇಲಿನ ಪ್ರೇಮ ದಿಂದ ಅವನ ಭುಜದ ಮೇಲೆ ಕೈಯಿರಿಸಿದನು. ಶಾಂತಾರಾಮಗೆ ಸಿಟ್ಟು ಬಂದು, ಅದನ್ನು ಕಿತ್ತೊಗೆದುಬಿಟ್ಟನು. ಆದರೆ ಅಬ್ದುಲನು ಅಷ್ಟಕ್ಕೆ ಮುಳಿ ಯಲಿಲ್ಲ; ಬದಲು "ಶಾಂತಾರಾಮ, ನೀನು ಈಹೊತ್ತು ನನ್ನ ಪಕ್ಷವಾಗಿ ಮಾತನಾಡದಿದ್ದಲ್ಲಿ ನನ್ನ ಮರ್ಯಾದೆಯೇ ಹೋಗುತಿತ್ತು"— ಎಂದನು. "ನಿನ್ನ ಪಕ್ಷವೆಂದರೇನು? ಅದು ನನ್ನ ಪಕ್ಷವಲ್ಲವೇ?" ಎಂದು ಮರುಮಾತು ಬಂದಿತು. ಅಬ್ದುಲನು ಸಪ್ಪಗಾದನು. "ಇರಲಿ— ಶಾಂತಾರಾಮ, ನೀನು ಹೇಳಿದ ವಿಷಯಗಳು ಯಾವ ಪುಸ್ತಕದಲ್ಲಿವೆ?" ಎಂದು ಕೇಳಿದನು. "ಎಲ್ಲಿವೆ ಯೆಂದು ನೀನೆ ಹುಡುಕಿಕೋ"— ಎಂದು ಬೆದರಿಸಿ ತನ್ನ ಮನೆಯ ಕಡೆಗೆ

ಹೋದನು. ತಾನು ಓದುವ ಪುಸ್ತಕಗಳ ಹೆಸರನ್ನು ಸಹ ಇತರರಿಗೆ ತಿಳಿಸು ವುದು ಶಾಂತಾರಾಮನ ಧೋರಣೆಗೆ ಸರಿದೋರುತ್ತಿರಲಿಲ್ಲ. ಅವನ ಕ್ಲಾಸಿ ನಲ್ಲಿ ಅವನು ಮಾತ್ರ "ಬ್ರಾಹ್ಮಣ"ನು; ಉಳಿದವರು ಅಸ್ಪೃಶ್ಯರು.

ಇನ್ನೊಂದು ದಿನ ಹುಡುಗರ ಯೋಗ್ಯತೆಯನ್ನು ತೂಗುವ ಇನ್ನೊಂದು ಪ್ರಸಂಗ ಬಂದಿತು. ಅವರ ಗಣಿತದ ಉಪಾಧ್ಯಾಯರು ಬಂದು "ನಾಳೆ ದಿನ ನೀವು ಈ ಇಪ್ಪತ್ತು ಲೆಕ್ಕಗಳನ್ನು ಮಾಡಿ ತರಬೇಕು"—ಎಂದರು. ರೇಖಾ ಗಣಿತವದು. ತಲೆಬಡಿದುಕೊಂಡರೂ ಅಷ್ಟನ್ನು ಮಾಡಿತರಲು ಸಾಧ್ಯವಿದ್ದಿರ ಲಿಲ್ಲ. ಸಾಧ್ಯವೇ ಇಲ್ಲೆಂದಲ್ಲ. ನಾಳೆಗೆ ಮಾಡಬೇಕಾದ ಇತರ ಹಲವು ಕೆಲಸಗಳೂ ಇದ್ದುವು. ಎಲ್ಲವನ್ನೂ ಪೂರೈಸುವುದು ಸಾಧ್ಯವಿದ್ದಿಲ್ಲ ಆದುದ ರಿಂದ ಅವರು ತಂತಮ್ಮೊಳಗೆ ತಂಡಗಳಾಗಿ ಮಾಡಿಕೊಂಡು, ಕೆಲವರು ಮೊದ ಲಿನ ಹತ್ತು ಲೆಕ್ಕಗಳನ್ನೂ; ಉಳಿದವರು ನಂತರದ ಹತ್ತನ್ನೂ ಮಾಡಿ ತರು ವುದು; ಬೇಗನೆ ಶಾಲೆಗೆ ಬಂದು ಅವುಗಳನ್ನು ತಂತಮ್ಮೊಳಗೆ ವಿನಿಮಯ ಮಾಡಿಕೊಳ್ಳುವುದೆಂದು ನಿಶ್ಚೈಸಿದರು. ಆದರೆ, ಈ ಕೂಟದ ನಿರ್ಣಯ ವಾಗುವುದರೊಳಗೆ ಶಾಂತಾರಾಮನು ಹೊರಟುಹೋಗಿದ್ದನು.

ಮರುದಿನ ಬೆಳಗ್ಗೆ ಹುಡುಗರು ಬೇಗನೆ ತಮ್ಮ ಕೊಟಡಿಯನ್ನು ಸೇರಿ ದರು. ವಿನಿಮಯವಾಯಿತು. ಆದರೆ ಒಂದು ಲೆಕ್ಕವನ್ನು ಮಾತ್ರ ಯಾ ರಿಗೂ ಪೂರೈಸಲು ಸಾಧ್ಯವಾಗಲೇ ಇಲ್ಲ. ಎಲ್ಲರೂ ಗಡಿಬಿಡಿಗೊಂಡರು. ಯಾರೊಬ್ಬರೂ ಮಾಡದೆಹೋದರೆ ಅಷ್ಟು ಭೀತಿಗೆ ಕಾರಣವಿರುತ್ತಿದ್ದಿಲ್ಲ. ಉಪಾಧ್ಯಾಯರೇ ಶಾಂತರಾಗಿ ಮಾಡಿ ತೋರಿಸುವರು. ಆದರೆ ಅದನ್ನು ಶಾಂತಾರಾಮನು ಮಾಡುವನೆಂಬುದು ನಿಶ್ಚಯ. ಅವನೊಬ್ಬನು ಮಾಡಿರಲು ಉಳಿದವರು ಮಾಡಿಲ್ಲವೆಂದರೆ ಆ ದಿನ ಮಂಗಳಾರತಿಯಾಗುವುದೇ ಸರಿ. ಅವರ ಗಣಿತದ ಉಪಾಧ್ಯಾಯರೆಂದರೆ ರುದ್ರಾವತಾರ! ಇವರು ಯೋಚಿಸು ತ್ತಿರುವ ಗಳಿಗೆಯಲ್ಲಿ ಶಾಂತಾರಾಮನು ಬಂದನು. ಅವನನ್ನು ಕೇಳೋಣ ವೆಂಬ ಮನಸ್ಸು; ಆದರೆ 'ಹೇಳಿಕೊಡದಿದ್ದರೆ?' ಎಂಬ ಭೀತಿ. ಅಬ್ದುಲನನ್ನು ಮುಂದೆ ತಳ್ಳಿದರು. ಅಬ್ದುಲನು ಮೆಲ್ಲಗೆ ಅವನ ಬಳಿಗೆ ಹೋಗಿ 'ಮಿಶ್ಟರ್, ಮಿಶ್ಟರ್'—ಎಂದು ಪಿಸುಗುಟ್ಟತೊಡಗಿದನು. ಶಾಂತಾರಾಮನು "ನಿನಗೇ

ನಾಗಿದೆಯೋ"—ಎಂದು ಗದರಿಸಿದನು. ಅವನು ಬಾಯಿ ತೆರೆದುದನ್ನು ಕಂಡು, ಉಳಿದವರು ಧೈರ್ಯವಾಗಿ ಅಬ್ದುಲನ ಬೆಂಬಲಕ್ಕೆ ಹೋದರು. "ಶಾಂತಾರಾಮ, ಈ ಲೆಕ್ಕ ಹೇಗೆಂದು ಸ್ವಲ್ಪ ಹೇಳಿಕೊಡು ಮಹಾ ರಾಯಾ"—ಎಂದರು. "ಅದು ಹಾಗೆಯೇ"—ಎಂದು ಶಾಂತಾರಾಮನು ತನ್ನಷ್ಟಕ್ಕೆ ಎದ್ದು ಹೊರಟುಹೋದನು. ಉಳಿದವರು ಹತಾಶರಾಗಿ ತಂ ತಮ್ಮ ಸ್ಥಾನಗಳಿಗೆ ಬಂದು ಕುಳಿತರು. ಅಬ್ದುಲನಂದನು—"ಇದು, ಶಾಂತಾರಾಮನಿಂದಲ್ಲ. ಅವನಪ್ಪನಿಂದಲೂ ಆಗದು"—ಎಂದು. ಉಳಿ ದವರು ಅಬ್ದುಲನನ್ನು ಚುಚ್ಚಿಕೊಟ್ಟರು. ಅವರ ಪ್ರೇರಣೆಯಂತೆ— ಅಬ್ದುಲನು ಅತ್ತಿತ್ತ ನೋಡುತ್ತ ಶಾಂತಾರಾಮನ ಆಸನದ ಬಳಿಹೋಗಿ ಅವನ ಪುಸ್ತಕಗಳೆಲ್ಲವನ್ನೂ ತಿರುವಿದನು. ಆದರೆ ಗಣಿತಪುಸ್ತಕವೇ ಇಲ್ಲ! "ಪಕ್ಕ ಕಳ್ಳನೋ ಅವನು"—ಎಂದುಕೊಂಡು ಸ್ವಸ್ಥಾನಕ್ಕೆ ಬಂದು ಬಿಟ್ಟನು.

ಸರಿ. ಗಣಿತದ ಉಪಾಧ್ಯಾಯರು ಕಾಲಿಟ್ಟೊಡನೆಯೇ, ಶಾಂತಾ ರಾಮನು ಬಂದನು. ಎಲ್ಲರೂ ಗಣಿತಪುಸ್ತಕಗಳನ್ನು ತೆರೆಯಬೇಕೆಂಬ ಆಜ್ಞೆ ಯಾಯಿತು. ಪ್ರತಿಯೊಬ್ಬರೂ ೨೦ರಲ್ಲಿ ೧೯ರವರೇ. "೨೦ಕ್ಕೆ ೨೦ನ್ನು ಮಾಡಿದವರು ಮಾತ್ರ ನಿಲ್ಲಿರಿ"—ಎಂದು ಅನುಜ್ಞೆಯಾಯಿತು. ಯಾರೂ ನಿಲ್ಲಲಿಲ್ಲ. ಅಬ್ದುಲನು ಶಾಂತಾರಾಮನ ಕಡೆಗೆ ಕಂಡು ನಕ್ಕುಬಿಟ್ಟನು. ಉಪಾಧ್ಯಾಯರು ಶಾಂತಾರಾಮನ ಕಡೆಗೆ ತಿರುಗಿ "ನೀನೂ ಮಾಡಿಲ್ಲ ವೇ?"—ಎಂದು ಕೇಳಿದರು. "ಮಾಡಿದ್ದೆ, ಆದರೆ ಒಂದು ಲೆಕ್ಕವೇ ಸರಿ ಯಾಗಿಲ್ಲ. ಅದು ಹೀಗಾಗಬೇಕು"—ಎಂದು ಅವರ ಬಳಿಗೆ ಹೋಗಿ ಆ ಗಣಿತಕಾರನ ದೋಷವನ್ನು ತೋರಿಸಿದನು. ಉಪಾಧ್ಯಾಯರಿಗೆ ಹರುಷ ವಾಯಿತು. "ಈ ಗಣಿತವೇ ತಪ್ಪೆಂದು ನಿರ್ಧರಿಸಿದವರಾರು?"—ಎಂದು ಕೇಳಿದರು. ಯಾರೂ ಬಾಯಿ ತೆರೆಯಲು ಸಾಹಸಪಡಲಿಲ್ಲ. "ನೀವೆಲ್ಲ ಕೋಣಗಳ ಮರಿಗಳೋ" ಎಂದರು ಎಲ್ಲರ ರೋಷವೂ ಶಾಂತಾ ರಾಮನ ಕಡೆಗೆ ತಿರುಗಿತು. ಸೇಡನ್ನು ತೀರಿಸುವೆನೆಂದು ಪ್ರತಿಯೊಬ್ಬರೂ ಕಾದು ಕುಳಿತರು. ಆದರೆ ಅವಕಾಶ ದೊರೆಯಬೇಕಲ್ಲ?

ಇನ್ನೆರಡು ತಿಂಗಳಲ್ಲಿ ಕಾಲ್ಚೆಂಡಿನ ಪಂಗಡವನ್ನು ನಿಶ್ಚಯಿಸಿದರು. ಎಂದಿನಂತೆ ಅದರ ನಾಯಕನನ್ನು ಬಾಲಕರೇ ಆರಿಸುವುದು. "ಈ ಬಾರಿ ಶಾಂತಾರಾಮನನ್ನು ಎಂದೂ ನಾಯಕನನ್ನಾಗಿ ಆರಿಸಕೂಡದೆ"ಂದು ಅಬ್ದು ಲನು ಪಣತೊಟ್ಟನು. ಅದೇ ರೀತಿ ಭರದಿಂದ ಪ್ರಚಾರಕಾರ್ಯ ತೊಡಗಿ ದನು ಅವನು ಸೂಚಿಸುವ ಮೊದಲೇ ಅನುಮೋದನೆಗಳು ಬಂದುವು. ಆರಿಸುವ ದಿನ ಬಂದಿತು. ಸಂಜೆ ಪ್ಯೈದಾಸಿನಲ್ಲಿ, ವ್ಯಾಯಾಮ ಕಾರ್ಯ ದರ್ಶಿಯರ ಮುಂದೆ ಎಲ್ಲರೂ ಸೇರಿದರು. "ನಾಯಕ ಸರ್! ನಾಯಕ ಸರ್!" - ಎಂದು ಕೂಗಿದರು. ಕಾರ್ಯದರ್ಶಿಯರು "ಈ ಬಾರಿಯೂ ನಿಮಗೆ ಶಾಂತಾರಾಮನೇ ನಾಯಕನು" - ಎಂದುಬಿಟ್ಟರು. ಪ್ರತಿಭಟಿಸುವ ಧೈರ್ಯವಿಲ್ಲ. ತಣ್ಣಗಾದರು.

ಆಟದ ಬಯಲಿನಲ್ಲಿ ಶಾಂತಾರಾಮನೆಂದರೆ ಹುಲಿಯಿದ್ದ ಹಾಗೆ. ಸಂ ಪೂರ್ಣ ಅಧಿಕಾರವು ಅವನಿಗಿತ್ತು. ಅವನೂ ಚೆಲುವಿನ ಆಟಗಾರನಾಗಿ ದ್ದನು. ಅವನಿದ್ದಲ್ಲಿ ಆಟಕ್ಕೆ ಚೆಲುವಿದ್ದಂತೆ, ಗೆಲವೂ ಇತ್ತು. ಆಟಕ್ಕೆ ಅವನು ಬರುವುದರಲ್ಲಿ ಯಾರ ಆತಂಕವೂ ಇದ್ದಿರಲಿಲ್ಲ; ಆದರೆ ಅವನ ನಾಯ ಕತ್ವಕ್ಕೆ ಯಾರ ಮನ್ನಣೆಯೂ ಇದ್ದಿರಲಿಲ್ಲ. ಆದರೆ ಮಾಡುವುದೇನು? ಬಾಯಿಮುಚ್ಚಿ ಸಹಿಸಿದರು. ಆಟದಲ್ಲಿ, ಸಕಾರಣವೇ ಇರಲಿ, ನಿಷ್ಕಾರಣವೇ ಇರಲಿ— ಅವನೆಂದುದಕ್ಕೆ ತಲೆವಾಗಬೇಕು ಚಿಕ್ಕ ಮಕ್ಕಳಾದರೆ, ತಪ್ಪಿ ನಡೆ ದಲ್ಲಿ, ಕಿವಿಕೆಂಪೂ ಆಗುತ್ತಿತ್ತು. ಒಂದು ದಿನ ಅಭ್ಯಾಸಮಾಡುವ ಗಳಿಗೆಯಲ್ಲಿ, ಕಿಟ್ಟುವು ಚೆಂಡನ್ನು ತನ್ನ ಕಡೆಗೇ ತುಳಿದುಬಿಟ್ಟನು. 'ಸ್ಯೂಸ್ಯಾಡ್' (ಆತ್ಮ ಹತ್ಯೆ) ಆಯಿತು! ಶಾಂತಾರಾಮನಿಗೆ ಬಂದಿತು ಕೋಪ— ಅಷ್ಟಿಷ್ಟಲ್ಲ. ನೇರಾಗಿ ಅವನ ಕಡೆಗೆ ಓಡಿದನು. ಅಷ್ಟರಲ್ಲಿಯೇ ಕಿಟ್ಟು ಮುದುರಿ ಮುದ್ದೆ ಯಾಗಿದ್ದನು. ಕಿವಿಗೆ ಕೈ ಕೊಡುವುದರಲ್ಲಿದ್ದನು. ಆದರೆ ಕಿಟ್ಟು ಸಿಟ್ಟು ಗೊಂಡು— "ಅದೆಲ್ಲ ಸಾಧ್ಯವಿಲ್ಲ" — ಎಂದನು. ಶಾಂತಾರಾಮನ ಹೆಮ್ಮೆಯೂ ನೊಂದಿತು. ಅವನ ಅಧಿಕಾರಕ್ಕೆ ಪ್ರಥಮ ಪ್ರತಿಭಟಿಯದು. ಮೂರು ದಿವಸ ಕಿಟ್ಟುವಿಗೆ ಆಡುವ ಹಕ್ಕಿಲ್ಲವೆಂದು ಆಜ್ಞಾಪಿಸಿದನು. ಕಿಟ್ಟು "ನಿಮ್ಮ ಆಟವೇ ಬೇಡ"ವೆಂದು ಹೊರಟುಹೋದನು. ಮೂರು ದಿನವಲ್ಲ, ಆರು ದಿನ

ವಾದರೂ ಕಿಟ್ಟು ಆಡಲು ಬಾರನು. ಇನ್ನೆಂಟು ದಿನಗಳಲ್ಲಿ ಅವರ ಶಾಲೆಯುವರಿಗೂ, ನೆರೆ ಊರಿನ ಶಾಲೆಯುವರಿಗೂ ಸ್ಪರ್ಧೆಯಿತ್ತು. ಕಿಟ್ಟುವಿನಂತಹ "ಹಾಫ್‌ಬೇಕ್" – ಇನ್ನೊಬ್ಬನಿರಲಿಲ್ಲ. ಉಳಿದವರೆಲ್ಲ, ಶಾಂತಾರಾಮುನನ್ನು, ಅವನನ್ನು ಕರೆಯಿಸಲು ಬಹಳವಾಗಿ ಬೇಡಿಕೊಂಡರು. ಶಾಂತಾರಾಮುನು ಕಲ್ಲುಗುಂಡಿನಂತೆ ಮೌನವಾಗಿದ್ದನು. ನಾಳೆ ಸ್ಪರ್ಧೆಗೆ ಹೊರಡುವುದು ಎನ್ನುವಾಗ, ಸುದ್ದಿ ವ್ಯಾಯಾಮ ಕಾರ್ಯದರ್ಶಿಯರಿಗೆ ಮುಟ್ಟಿತು. ಶಾಂತಾರಾಮುನ ಈ ಹಟದಿಂದ ಶಾಲೆಗೆ ಅಪಕೀರ್ತಿ ಬರುವುದೆಂದು ಅಂಜಿ, ತಾವೇ ಕಿಟ್ಟುವಿನ ಬಳಿಗೆ ಹೋಗಿ, ಅವನನ್ನು ಶಾಂತಪಡಿಸಿ, ಕಳುಹಿಸಿ ಕೊಟ್ಟರು. ಶಾಂತಾರಾಮುನಿಗೆ ತಾನೇ ಗೆದ್ದವನೆಂಬ ಹೆಮ್ಮೆಯಾಯಿತು. ಕಿಟ್ಟುವು ಆಡಲು ಬಂದನು. ಆದರೆ ಶಾಂತಾರಾಮುನ ಮೇಲೆ ಪ್ರಸನ್ನನಾಗಲಿಲ್ಲ. "ಈ ಸ್ವದೇಶಿ ಖರ್ಜೂರ(ಹುಣಿಸೇ ಹಣ್ಣು)ವನ್ನು ಅಗ್ಗದಲ್ಲಿ ವಿಕ್ರಯಿಸದಿದ್ದರೆ ನಾನೇಕೆ?" – ಎಂದು ಪಣತೊಟ್ಟನು.

ಆಟದ ಕೂಟವು ನೆರೆ ಊರಿಗೆ ಹೋಗಿ ತಮ್ಮ ಶೌರ್ಯವನ್ನು ತೋರಿಸಿ ವಿಜಯವನ್ನು ಪಡೆದು ಬಂದಿತು. ಕಿಟ್ಟುವಿನ ಸೇಡು ಮಾತ್ರ ಪೂರ್ಣವಾಗಲಿಲ್ಲ.

ಕ್ರಿಸ್‌ಮಸ್ ಪರೀಕ್ಷೆಯು ಕಾಲ ಬಂದಿತು. ಎಲ್ಲರ ಮನಸ್ಸು, ಪಾಠಗಳ ಕಡೆಗೆ ಧಾವಿಸಿತು. ಬೆಳಗಿನಿಂದ ರಾತ್ರಿಯ ತನಕ, ರಾತ್ರಿಯಿಂದ ಬೆಳಗಿನ ತನಕ ಅದೇ ಧ್ಯಾನವಾಯಿತು ಎಲ್ಲ ಪರೀಕ್ಷೆಗಳು ಕಳೆದುವು. ಗಣಿತವೊಂದೇ ಉಳಿಯಿತು. ಯಾರೋ ಬಂದು ಹುಡುಗರ ಕಿವಿಯಲ್ಲಿ "ಈ ಒಂದು ಲೆಕ್ಕ ಬರುವುದು ಖಂಡಿತ"—ಎಂದು ಹೇಳಿದರು. ಹುಡುಗರು ಅದನ್ನೇ ಬಿಡಿಸಲು ಬಡಿದಾಡತೊಡಗಿದರು. ಎಷ್ಟು ಯತ್ನಿಸಿದರೂ ಮುಂದರಿಸುವ ಸರಿಯಾದ ಮಾರ್ಗವೇ ಕಾಣಿಸಲಿಲ್ಲ. ಬೇರೆ ಉಪಾಯ ಕಾಣದೆ, ಶಾಂತಾರಾಮುನ ಬಳಿಗೆ ಹೋದರು. ಆದರೆ ಶಾಂತಾರಾಮುನು— "ನನಗೆ ತಿಳಿಯದು" ಎಂದುಬಿಟ್ಟನು. ಅವರು ಹತಾಶರಾಗಿ ಮರಳಿದರು. ನಿಜಕ್ಕೂ ಪರೀಕ್ಷೆಯಲ್ಲಿ ಅದೇ ಲೆಕ್ಕವು ಬಂದಿತು. ಯಾರೂ ಮಾಡಲಾರದೆ ಹೋದರು. ಪ್ರಾಯಶಃ ಶಾಂತಾರಾಮುನೂ ಮಾಡಿರಲಿಕ್ಕಿಲ್ಲವೆಂದು ತಿಳಿ

ದರು. ಕಾರಣ, ಅವರ ಮುಂದೆ, ದೂರದಲ್ಲಿ ಕುಳಿತು ಪೇಚಾಡುತ್ತಿರುವವ ನಂತೆ ತೋರಿಸಿಕೊಂಡನು. ಆದರೆ, ಪರೀಕ್ಷೆ ಮುಗಿದ ಬಳಿಕ ಅವನಿಗೆ ಗಣಿತದ ಉಪಾಧ್ಯಾಯರು ಭೇಟಿಯಾಗಿ, “ಶಾಂತಾರಾಮ, ಎಷ್ಟು ಲೆಕ್ಕ ಗಳನ್ನು ಮಾಡಿರುವೆ?” - ಎಂದು ಕೇಳಿದರು. “ಅವನು ಏಳನ್ನೂ”—ಎಂ ದನು. ಈ ಮಾತು, ಅಲ್ಲೆಲ್ಲೋ ಅಲೆದಾಡುತ್ತಿದ್ದ ಅಬ್ದುಲನ ಕಿವಿಗೆ ಬಿದ್ದಿತು. ಅವನು ಉಳಿದವರಿಗೆ ಅದನ್ನು ತಿಳಿಸಿದನು. ಬಾಲಕರಿಗೆ ಶಾಂತಾರಾಮನ ಮೇಲಿನ ತಿರಸ್ಕಾರವು ಮತ್ತಷ್ಟು ಅಧಿಕವಾಯಿತು.

ಕೆಲವು ತಿಂಗಳ ಕಾಲ ಸಂದಿತು. ಒಂದು ಪರೀಕ್ಷೆಯು ಕಳೆದು ಇನ್ನೊಂದು ಪರೀಕ್ಷೆಯು ಬಂದಿತು. ಇದು ದೊಡ್ಡ ಪರೀಕ್ಷೆ. ಈ ಪರೀ ಕ್ಷೆಯ ವೇಳೆ ಯಾರೊಬ್ಬರೂ ಶಾಂತಾರಾಮನ ಬಳಿಗೆ ಹೋಗಲು ಸಾಹಸ ಪಡಲಿಲ್ಲ.

ಪರೀಕ್ಷೆ ಮುಗಿಯಲು, ಹ್ಯಾಸ್ಕೂಲಿನ ವಿದ್ಯಾರ್ಥಿಗಳಲ್ಲಿ ಇಷ್ಟವಿರು ವವರು, ಎಲ್ಲಾದರೂ ಚಿಕ್ಕ ಪ್ರವಾಸವೊಂದಕ್ಕೆ ಹೊರಡಬೇಕೆಂದು ನಿರ್ಣಯ ವಾಯಿತು. ಇಷ್ಟು ದಿನ ಪರೀಕ್ಷೆಗಾಗಿ ಬಡಿದಾಡಿದ ಬಾಲಕರಿಗೆ, ಯಾತ್ರೆಯ ಈ ನೆಪವು ತೀರ ಆನಂದದಾಯಕವಾಗಿ ಕಂಡಿತು. ಸುಮಾರು ಇಪ್ಪತ್ತು ಜನರು ಮುಂದಾಳಾಗಿ ಬಂದರು. ಎಲ್ಲರಿಗೂ ಅದು ಸಾಧ್ಯವಿರಲಿಲ್ಲ. ಈ ಇಪ್ಪತ್ತು ಮಂದಿಯೂ ಸೇರಿ, ಯಾತ್ರೆಯ ಸ್ಥಳವನ್ನು ನಿರ್ಣಯಿಸಬೇಕೆಂದು ಯೋಚನೆಯಾಯಿತು. ಒಬ್ಬೊಬ್ಬರು ಒಂದೊಂದು ಸ್ಥಳದ ಹೆಸರನ್ನು ಹೇಳಿದರು. ಒಬ್ಬರು “ಬೇಕಲ”ವೆಂದರು. “ಅಲ್ಲೇನಿದೆ?” ಎಂದು ಒಬ್ಬನು ನುಡಿದನು. “ಕಾರ್ಕಳ”ವೆಂದು ಇನ್ನೊಬ್ಬನು ನುಡಿದನು. “ಅಲ್ಲೇನಿದೆ?” ಎಂದು ಮತ್ತೊಬ್ಬನು ನುಡಿದನು. ಹೀಗಾಗಿ ತೆಗೆದ ತೆಗೆದ ಹೆಸರುಗಳೆಲ್ಲ ಹಿಂದೆಬಿದ್ದುವು. ನಮ್ಮ ಕಿಟ್ಟುವೂ ಅವರಲ್ಲಿ ಒಬ್ಬನು. ಅವನು ಕಡುಹೊತ್ತಿನ ತನಕ ಯೋಚಿಸಿ “ಕುದುರೆಮುಖ”—ಎಂದನು. ಯಾರ ತಲೆಗೂ ಆ ಹೆಸರು ಸೂಚಿಸಿರಲಿಲ್ಲ. ಅವರಲ್ಲಿ ಬೇಕಲವನ್ನು ಕಂಡವರಿದ್ದರು, ಕಾರ್ಕಳವನ್ನು ಕಂಡವರಿದ್ದರು. ಮೋಟಾರು ರೈಲುಗಳ ಪಯಣದಿಂದಲೇ ಸಾಗುವ ಆ ಸ್ಥಳಗಳಿಗೆ ಪ್ರವಾಸವೆಂದೇಕೆ ಕರೆಯಬೇಕೆಂದೂ

ತೋರಲಿಲ್ಲ. ಈಗ ಮತವನ್ನು ತೆಗೆದರು. ಕುದುರೆಮುಖಕ್ಕೆ ಅಧಿಕವಾದ ಬಲವು ದೊರೆಯಿತು. ಎಷ್ಟು ದಿನಗಳನ್ನು ಅಲ್ಲಿ ಕಳೆಯುವುದು, ಯಾವ ಬಗೆಯಿಂದ ಸಾಗುವುದು, ಎಂಬೀ ವಿಷಯಗಳ ಚರ್ಚೆಯಾಯಿತು. ಮಂಗಳೂರಿನಿಂದ ಮೋಟಾರಿನ ಮೇಲೆ ಬೆಳ್ತಂಗಡಿಯ ತನಕ ಸಾಗುವುದೆಂದೂ, ಅಲ್ಲಿಂದ ಮುಂದೆ ಕಾಲುನಡೆಯೆಂದೂ ನಿರ್ಣಯವಾಯಿತು. ಎಲ್ಲರೂ ಅನುಮೋದನೆಯನ್ನಿತ್ತರು. ಕನಿಷ್ಠ ಒಂದು ವಾರವನ್ನಾದರೂ ಬೆಟ್ಟದ ತುದಿಯಲ್ಲಿ ಕಳೆಯದಿದ್ದರೆ ಫಲವಿಲ್ಲ ಎಂದೂ ನಿಶ್ಚಯವಾಯಿತು. ಕೂಟವು ನಾಳೆಯೇ ಹೊರಡುವುದಕ್ಕೆ ಸಕಲ ಸಿದ್ಧತೆಗಳಾದುವು. ಅವರ ಜತೆಯಲ್ಲಿ, ಅವರ ವ್ಯಾಯಾಮ ಕಾರ್ಯದರ್ಶಿಯರು ಮುಂದಾಳಾಗಿ ಬರುವುದೆಂದು ನಿರ್ಣಯವಾಯಿತು. ಶಾಂತಾರಾಮನ ಕೊರಳಿಗೆ ಉಪನಾಯಕ ಪದವಿ ಬಿತ್ತು. ಮಂಡಲದಲ್ಲಿ ಅಬ್ದುಲ್, ಕಿಟ್ಟು ಇತ್ಯಾದಿ ವಾನರಸೇನೆಯ ಸದಸ್ಯರು ಕೂಡಿದ್ದರು.

ಮರುದಿನ ಮುಂಜಾನೆ ಎಲ್ಲರೂ ಹಂಪನಕಟ್ಟೆಯಲ್ಲಿ ಸೇರಿದರು. ಗದ್ದಲವೇ ಗದ್ದಲ! ಒಂದು ಬಸ್ಸನ್ನು ತುಂಬಿದರು. ಏರಿ, ದಾರಿಯುದ್ದಕ್ಕೂ ಕೋಲಾಹಲಮಾಡುತ್ತ ಸಾಗಿದರು. ಪೇಟೆ ಬಂದಿತೆಂದರೆ ಇವರ ಕೊರಳ ಶಕ್ತಿ ಇಮ್ಮಡಿಯಾಗುವುದು. ಒಂಭತ್ತು ತಾಸಿಗೆ ಸರಿಯಾಗಿ ಬಸ್ಸು ಬೆಳ್ತಂಗಡಿಯಲ್ಲಿ ಬಂದು ನಿಂತಿತು. ಮಂಡಲದವರು ಮುಖಮುಖ ಕಂಡರು. ಕೆಳಗೂ ಇಳಿದರು. ಅಂದಿನ ಪಯಣವು ಅಲ್ಲಿಂದ ಹತ್ತು ಮೈಲು ದೂರದ ನಾವೂರಿನಲ್ಲಿ ಕೊನೆಗಾಣತಕ್ಕುದೆಂದು ನಿರ್ಣಯವಾಯಿತು. ಎಲ್ಲರೂ ಪಯಣಕ್ಕೆ ಬೇಕಾದ, ದವಸಧಾನ್ಯಗಳನ್ನು ಕೊಳ್ಳಲು ಅಂಗಡಿಗೆ ಹೋದರು. ಸಾಮಾನುಗಳನ್ನು ಕೊಂಡಾಯಿತು. ಆದರೆ ಅದು ಸಣ್ಣ ಹೊರೆಯಾಗಲಿಲ್ಲ. ಶಾಂತಾರಾಮನಂದನು: “ನಾವೂರ ತನಕ ಒಳ್ಳೆಯ ಮಾರ್ಗವಿದೆಯಂತೆ. ಅಲ್ಲಿಗೂ ಬಸ್ಸನ್ನು ಏಕೆ ಒಯ್ಯಬಾರದು?”. ಕಿಟ್ಟುವು— “ಇಲ್ಲಿಲ್ಲ, ಇನ್ನು ನಡೆಯುವುದೇ ಸರಿ”—ಎಂದನು. ಸರಿ, ಮತಗಳನ್ನು ತೆಗೆದರು. ಕಿಟ್ಟುವಿನ ಮಾತು ನಡೆಯಲಿಲ್ಲ. ಕೂಡಲೆ ಮೋಟಾರನ್ನು ಗೊತ್ತುಮಾಡಿ ಪಯಣ ಸಾಗಿಸಿದರು. ಹನ್ನೊಂದು ಘಂಟೆಗೆ ಸರಿಯಾಗಿ ನಾವೂರಿನ ಬಂಗಲೆಯಲ್ಲಿ ಪಾಳಯವು ಬಂದಿಳಿಯಿತು.

ಬಂದವರು ಅಡುಗೆಯ ಒಲೆಯನ್ನು ಹೂಡಿದರು. ಅಡುಗೆಯಾಯಿತು. ಊಟವಾಯಿತು. ಊಟವಾಗಿ ಚಿಕ್ಕದೊಂದು ನಿದ್ರೆಯಾಯಿತು. ಘಟ್ಟದ ಪಯಣವು ಮರುದಿನವೆಂದು ನಿಶ್ಚಯವಾಗಿದ್ದುದರಿಂದ, ಎಲ್ಲರೂ ಸಂಜೆ ತಿರುಗಾಡಲು ಹೋದರು. ಕಾಡಿನಲ್ಲಿ ಅಲೆದಾಡಿ ಮನಸ್ಸಿಗೆ ಅತ್ಯಂತ ಉತ್ಸಾಹವಾಯಿತು. ಸಂಜೆ ತಿರುಗಿ ಠಾಣೆಗೆ ಬಂದು, ನಿತ್ಯಕರ್ಮವನ್ನು ಮುಗಿಸಿ ಕುಳಿತರು. ಆಗ ಕಾರ್ಯದರ್ಶಿಯರು ಬಂದು—ತನಗೆ ಅವರ ಜತೆಯಲ್ಲಿ ಪಯಣವನ್ನು ಮುಂದರಿಸಲು ಅನುಕೂಲವಿಲ್ಲೆಂದೂ, ಅವರೊಳಗೇ ಯಾರನ್ನಾದರೂ ಮುಂದಾಳಾಗಿ ಆರಿಸಿ, ಕಾರ್ಯವನ್ನು ಸಾಗಿಸಬೇಕೆಂದೂ ತಿಳಿಸಿದರು. ಹುಡುಗರ ಆಗ್ರಹವು ವ್ಯರ್ಥವಾಯಿತು. ಕಾರ್ಯದರ್ಶಿಯರ ತಾಯಿಗೆ ಅಸ್ವಸ್ಥವೆಂದು ಸುದ್ದಿ ಮುಟ್ಟಿದುದರಿಂದ ಅವರು ಮರಳಲೇ ಬೇಕಾಯಿತು. ಆದರೆ ಮರಳುವ ಮೊದಲು, ಇವರಲ್ಲಿನ ವ್ಯವಸ್ಥೆಯನ್ನು ಸರಿಗೊಳಿಸಬೇಕೆಂದು ನಿರ್ಣಯಿಸಿದರು. ಮೊದಲು—ಮುಂದಾಳನ್ನು ಆರಿಸುವುದು. ಅವನ ಅಪ್ಪಣೆಗೆ ಎಳ್ಳಷ್ಟು ವ್ಯತಿರಿಕ್ತರಾಗಿ ಆಚರಿಸಕೂಡದೆಂದು ಕಟ್ಟಪ್ಪಣೆಯಾಯಿತು. ಶಾಂತಾರಾಮನ ಹೆಸರನ್ನು ಅವರಾಗಿ ಸೂಚಿಸುತ್ತಿದ್ದರೋ, ಏನೋ. ಆದರೆ, ಪಯಣವು ಕಠಿಣದ್ದೆಂದು, ಆ ಸೂಚನೆಯನ್ನು ಅವರಾಗಿ ಮಾಡಲಿಲ್ಲ. ಬಾಲಕರು ತಂತಮ್ಮೊಳಗೆ ಗುಜುಗುಜು ಮಾತನಾಡತೊಡಗಿದರು ಯಾರನ್ನು ಸೂಚಿಸುವುದೆಂದೂ ಅವರಿಗೆ ತೋಚಲಿಲ್ಲ. ಅಂತು ಶಾಂತಾರಾಮನು ಬೇಡವೆಂದಿತ್ತು. ಅಬ್ದುಲನು ಜೇಷ್ಠಗೆ—"ನಮ್ಮ ಕಿಟ್ಟು ಆಗಬಹುದು"—ಎಂದನು. "ಯಾರಾದರೂ ಸರಿಯೇ—ಅವನು(ಶಾಂತಾರಾಮನು)ಬೇಡ" ಎಂದು ನಿರ್ಣಯಿಸಿದನು. ಅವರು ಅಬ್ದುಲನ ಮಾತನ್ನು ಪುಷ್ಟೀಕರಿಸಿದರು. ಕಿಟ್ಟುವು ಮೆಲ್ಲಗೆ "ನನಗೆ ಈ ಹೊರೆ ಬೇಡ. ಇದುವರೆಗೆ ನಮ್ಮ ನಾಯಕನಾಗುತ್ತಿದ್ದ ಶಾಂತಾರಾಮನೇ ಏಕಾಗಬಾರದು?"—ಎಂದನು. ಅವನ ಬಾಯಿಯಿಂದ ಆ ಸೂಚನೆ ಹೊರಟುದಕ್ಕಾಗಿ ಅವರಿಗೆ ಆಶ್ಚರ್ಯವಾಯಿತು. ಯಾರೂ ಮಾತನಾಡಲಿಲ್ಲ. ಕಾರ್ಯದರ್ಶಿಯರು—"ಅವನೇ ಆಗಲಿ" ಎಂದರು. ಶಾಂತಾರಾಮನು ನಾಯಕನಾದನು. ಪಯಣಕಾಲದಲ್ಲಿ ದಾರಿ ಸೂಚಿಸಲು 'ಯಾರು?' ಎಂದಾ

ಯಿತು. ಆ ಕೆಲಸವನ್ನು ಕಿಟ್ಟು ಒಪ್ಪಿಕೊಂಡನು. ಇನ್ನುಳಿದವರನ್ನು ಎರಡು ತಂಡವಾಗಿ ವಿಭಾಗಿಸಿ, ಒಂದು ಪಡೆಯುವರು ಅಡುಗೆಮಾಡಲು ನಿಂತರೆ ಉಳಿದವರು ಇತರ ಕೆಲಸಗಳಿಗೆಂದು ನಿರ್ಣಯವಾಯಿತು. ಈ ಎರಡು ಪಂಗಡಗಳಿಗೆ ಗೋಪಾಲ, ನಂದರಾಯರು ಮುಖಂಡರಾದರು. ಇವರ ಮೇಲೆ ಕಿಟ್ಟು ಉಪನಾಯಕ; ಅವನ ಮೇಲೆ ಶಾಂತಾರಾಮ. ಸರಿ, ಜಯಜಯಕಾರವಾಯಿತು. ಗೋಪಾಲಕೀ ಜೈ, ನಂದರಾಯಕೀ ಜೈ, ಕಿಟ್ಟುಕೀ ಜೈ — ಶಾಂತರಾಮನಿಗೂ ಜೈ!

ರಾತ್ರಿ ಕಳೆದು ಬೆಳಗಾಗಲು, ತುಸು ಉಪಾಹಾರವನ್ನು ಕಟ್ಟಿಕೊಂಡು ಎಲ್ಲರೂ ಘಟ್ಟವನ್ನು ಏರಲು ಸಿದ್ಧರಾದರು. ಕಾರ್ಯದರ್ಶಿಯರು ಅಗಲಿದರು. “ಶಾಂತಾರಾಮ, ಎಲ್ಲರನ್ನೂ ಸುಧಾರಿಸಿಕೊಂಡು ಹೋಗು” — ಎಂದರು. ಕಿಟ್ಟು ಮುಂದೆ; ಅವನ ಹಿಂದೆ ಗೋಪಾಲನ ಸೇನೆ; ಅವನ ಹಿಂದೆ ನಂದರಾಯನ ಪಡೆ. ಶಾಂತಾರಾಮನು ಇವೆಲ್ಲವುಗಳ ದಳನಾಯಕ! ಪಡೆ ಹೊರಟಿತು. ‘ವಂದೇ ಮಾತರಂ’ ಎಂದು ಕೂಗಿತು. “ಲೆಫ್ಟ್ ರ್ರೈಟ್” ಎಂದು ಘರ್ಜಿಸಿತು. ಎಲ್ಲರ ಕೈಯಲ್ಲೂ ಒಂದೊಂದು ದೊಣ್ಣೆ. ಎಲ್ಲರ ಬೆನ್ನಮೇಲೂ ಒಂದೊಂದು ಹೊರೆ. ಕಂಬಳಿ, ಬಟ್ಟೆ, ಅಕ್ಕಿ, ಹಿಟ್ಟು, ಸಕ್ಕರೆ— ಇವುಗಳ ಚಿಕ್ಕಪುಟ್ಟ ಮೂಟೆಗಳು.

ಬೆಟ್ಟದ ತೊಪ್ಪಲಿನಲ್ಲಿ ಕಾಲಿಟ್ಟರು. ಎರಡು ಬದಿಗಳಲ್ಲೂ ಎತ್ತರವಾದ ಮರಗಳ ಗುಂಪು. ಬೆಳಗಾದರೂ, ಬೆಳಕಿಲ್ಲದ ಕಾಡು ಹಾದಿ! ದಾರಿಯುದ್ದಕ್ಕೂ ಅಡಿಯೆತ್ತರದ ತರಗಿನ ರಾಶಿ. ಸೇನೆ ಸಾಗಿತು. ಉತ್ಸಾಹದಿಂದ ಕೂಗಿತು. ಪರ್ವತಾವಳಿಗಳು ಮಾರ್ದನಿಗೊಟ್ಟುವು. ಕಿಟ್ಟುವು ಒಮ್ಮೆಗೇ, ಅಗಲದ ಇಳಿಜಾರಿನ ಹಾದಿಬಿಟ್ಟು, ಕಿರಿದಾದ ಅಡ್ಡಹಾದಿ ಹಿಡಿದನು! ಶಾಂತಾರಾಮನು — “ಏನದು?” ಕೇಳಿದನು. ಇದು ಘಟ್ಟದ ಕಿರುದಾರಿ! ಅಗಲದ ಹಾದಿಹಿಡಿದರೆ ತುದಿಗೆ ೧೯ ಮೈಲಿ, ಈ ಹಾದಿಯಾಗಿ ಬರೇ ೧೩ ಮೈಲಿ ಎಂದನು. “ಕಡಿಮೆ ದೂರದ ಹಾದಿಬೇಕು” ಎಂದು ಸೇನೆ ಕೂಗಿತು. ಕಿಟ್ಟು ಕೋಲೂರಿಕೊಂಡು ಸಾಗಿದನು. ಹಾದಿಯೆಂದು ಅದಕ್ಕೆ ಹೆಸರು. ನಿಜಕ್ಕೂ ಕಿಟ್ಟು ಹತ್ತಿದ್ದೇ ಹಾದಿ. ಬೆಟ್ಟ ಏರುತ್ತಹೋದರು. ಮೈ ಬೆವ

ರಿತು. ಧ್ವನಿಯಡಗಿತು. ಉಸುರು ಉಬ್ಬುತ್ತ ಹೋಯಿತು. ಆದರೂ ಕಿಟ್ಟುವು, ಕಪಿಯಂತೆ ಏರುತ್ತಿರುವನು. ಅರ್ಧ ತಾಸಾಯಿತು—ಕಿಟ್ಟು ಸಾಗುತ್ತಲೇ ಇರುವನು. ಬೆಟ್ಟದ ತುದಿಯಿಲ್ಲ! ತುದಿಯೇನು? ಬುಡವೂ ಇಲ್ಲ; ಹಿಂದೂ ಇಲ್ಲ, ಮುಂದೂ ಇಲ್ಲ. ನಡುವೊಂದೇ ಆ ಪರ್ವತರಾಶಿಗೆ. ಸ್ವಲ್ಪ ಹೊತ್ತಿನಲ್ಲಿ ತಿರುಗಿ ಅಗಲಿದ ಹಾದಿ ಅವರಿಗೆ ಸಂದಿಸಿತು. ಕಿಟ್ಟುವು ಕೂಗಿಹೇಳಿದನು–"ಎರಡು ಮೈಲಿ ಕಳೆಯಿತು!" ಎಂದು. ಒಬ್ಬೊಬ್ಬರಿಗೆ ೧೦ ಮೈಲು ನಡೆದುದಕ್ಕಿಂತ ಹೆಚ್ಚಿನ ಆಯಾಸವಾಗಿತ್ತು. ಶಾಂತಾರಾಮನು ಮುಂದೆ ಬಂದು–"ಕಿಟ್ಟು, ಈ ಹಾದಿ ಬೇಡ. ಅಗಲದ ಹಾದಿಯೇ ಒಳಿತು. ದೂರವಾದರೂ ಚಿಂತೆಯಿಲ್ಲ" ಎಂದನು. ಕಿಟ್ಟುವು "ಏನು?" ಎಂದು ಕೇಳಲು ಅಬ್ದುಲನು ತಕ್ಷಣ—'ಹೋಗುತ್ತಿರುವ ಹಾದಿಯೇ ಒಳಿತೆಂ'ದನು. ಸರಿ, ಸಾಗಿದರು ಮುಂದೆ ಇನ್ನೂ ಒಂದು ತಾಸಿನ ಪಯಣ ಮುಗಿಯಲು ಆ ಬೆಟ್ಟದ ಇನ್ನೊಂದು ಮಗ್ಗುಲನ್ನು ಸೇರಿದರು. ಬೆಟ್ಟದ ಒಂದು ಮೈ ಬರಿದಾಗಿದ್ದುದರಿಂದ ಅದರ ಮಗ್ಗುಲಿನ ಕಣಿವೆ ಅತಿ ರಮ್ಯವಾಗಿ ಕಾಣಿಸುತ್ತಿತ್ತು. ಸಾವಿರ ಅಡಿ ಎತ್ತರದ ಜಮಾಲಗಡವು, ಕಡೆಯುವ ಕಲ್ಲಿನಂತೆ ಚಿಕ್ಕದಾಗಿ ಕಾಣಿಸುತ್ತಿತ್ತು. ಇವರ ಕಾಲಕೆಳಗೆ ಮೋಡಗಳು ಚಲಿಸುತ್ತಿದ್ದುವು. ಮೂಡು ದಿಕ್ಕಿನಲ್ಲಿ ಸೂರ್ಯನು ಥಳಥಳಿಸುತ್ತಿದ್ದನು "ಹಾ–" ಎಂದು ಬಾಲಕರು ಕುಳಿತರು. ಶಾಂತಾರಾಮನ ಕಪೋಲಗಳು ಕೆಂಪಡಿರಿದ್ದುವು. ಬೆವರು ಮಳೆಯಾಗಿ ಹರಿಯುತ್ತಿತ್ತು. ಅಷ್ಟರಲ್ಲಿ ಕಿಟ್ಟುವು "ಹೀಗೆ ಕುಳಿತರಾಗದು. ಮುಂದಿನ ಹಾದಿ ಮತ್ತೂ ಕಠಿಣವಿದೆಯಂತೆ. ಇನ್ನೂ ೧೦ ಮೈಲಿ ಸಾಗಬೇಕು" ಎಂದನು! ಸರಿ, ಉಳಿದವರು ಎದ್ದರೋ ಇಲ್ಲವೊ; ಕಿಟ್ಟುವಿನ ಗಾಡಿ ಹೊರಟಿತು. ಈಗಿನ ಪಯಣ ಅಷ್ಟು ಏರಿಳಿತದ್ದಲ್ಲ. ಕಲ್ಲುಹಾದಿ. ಮುಗ್ಗರಿಸುವ ಭೀತಿ ಬಹಳ. ಆದರೆ ನಡೆಯಲು ದಣಿವಿಲ್ಲ. ಬಲಮಗ್ಗುಲನ್ನು ಕಂಡರೆ ಮಾತ್ರ ತಲೆಯೇ ತಿರುಗುವುದು. ಎಡಮಗ್ಗುಲಿಗೆ, ಎತ್ತರವಾದ ಬೆಟ್ಟ; ಬಲಮಗ್ಗುಲಿಗೆ, ಒಮ್ಮೆಗೇ ಇಳಿಯುವ ಬೆಟ್ಟದ ತೊಪ್ಪಲು. ಕಾಲುತಪ್ಪಿದರೆ ಖಾನೇಶುಮಾರಿ!

ಪಡೆ ಸಾಗಿತು. ಗಿಡಮರಗಳಿಲ್ಲ; ಬೋಳುಬೆಟ್ಟದ ಕಿಬ್ಬದಿ. ಒಂದೆ ರಡು ಮೈಲಿಸಾಗಲು ತಿರುಗಿ ಕಾಡುಬಂದಿತು. ಕಾಡಿನಲ್ಲಿ ಕಾಲಿಟ್ಟೊಡನೆ ಕಿಟ್ಟು ಓಟಕ್ಕೆತೊಡಗಿದನು. ಶಾಂತಾರಾಮನು "ನಿಧಾನಿಸಿ ಹೋಗೆ"ಂದನು. ಆದರೆ ಕಿಟ್ಟುವಿನ ಕಾಲು ಕೇಳಬೇಕಲ್ಲ. ಪಡೆಯುವರು ಕಾಡನ್ನು ಸೇರಲು ಅದಕ್ಕೂ ಬಲವಾದ ಓಟತೊಡಗಿದರು. ಶಾಂತರಾಮನೇ ಹಿಂದುಳಿದನು. ಇವರಿಗೆ ತಕ್ಕ ಮನ್ನಣೆಕೊಡುವೆನೆಂದು ತನ್ನಷ್ಟಕ್ಕೆ ನಿಶ್ಚಯಿಸಿದನು. ಆದರೆ ಹತ್ತು ಹೆಜ್ಜೆಯಷ್ಟು ಮೆಲ್ಲಗೆ ಸಾಗಿದುದೇ ತಡ—ಅಡಿಗಳನ್ನು ನೋಡು ತ್ತಾನೆ: ಒಂದಲ್ಲ, ನೂರು ಜಿಗಣೆಗಳು ಅವನ ರಕ್ತಪಾನಕ್ಕೆ ಹೊರಟದ್ದುವು. 'ಅಯ್ಯೋ'—ಎಂದು ಕಿರುಚಿಕೊಂಡನು. ಯಾರೂ ಇಲ್ಲ. ಕಾಲನ್ನು ಕೊಡ ವುತ್ತ ಓಟಕ್ಕೆ ತೊಡಗಿದನು. ಎಷ್ಟು ಓಡಿದರೂ ಅದೇ ಪಾಡು. ಬಲುದೂರ ಸಾಗಿದರೂ, ಮುಂದೆ ಸಾಗಿದವರು ಕಾಣರು. ಕಿಟ್ಟುವನ್ನು ಶಪಿಸುತ್ತ ಹಿಂಬಾಲಿಸಿದನು. ಕೊನೆಗೊಂದು, ಬೆಟ್ಟದ ಬದಿಯಲ್ಲಿ ಕುಳಿತು ಕಾಲುಗಳಿಗೆ ಅಂಟಿಕೊಂಡ ಜಿಗಣೆಗಳನ್ನು ಎಬ್ಬಿಸತೊಡಗಿದನು. ಅವನಿಗೂ ತುಸು ದೂರದಲ್ಲಿ ಪಡೆಯು ವಿಶ್ರಮಿಸಿತ್ತು. ಅವರ ಸ್ವರವನ್ನು ಕೇಳಿ ಅಲ್ಲಿಗೆ ಧಾವಿಸಿದನು. "ಕಿಟ್ಟು, ಮೆಲ್ಲಗೆ ಹೋಗಲು ನಿನಗೇನು ಸಂಕಟ? ನಡೆದು ಆಯಾಸವಾಗಿದೆ. ಇನ್ನೂ ಓಡುವುದೆಂದರೆ"—ಎಂದು ಗದರಿಸಿದನು. ಕಿಟ್ಟುವು—"ನನಗೇನು? ಮೆಲ್ಲಗೆ ನಡೆಯುವ. ಆದರೆ ಜಿಗಣೆಗಳಿಗೆ ನೀನೇ ಸಮಾಧಾನ ಹೇಳು"—ಎಂದನು. ಪಡೆಯುವರು "ಮೆಲ್ಲಗೆ ಆಗಲಾರದು. ಪ್ರಾಣವನ್ನು ಹೀರಿಬಿಟ್ಟಾವು" ಎಂದರು. ತಿರುಗಿ ಪಡೆಯು ಹೊರಟಿತು. ಮೆಲ್ಲಗೆ ಹೋಗುವುದು ಅವಿವೇಕವೆಂದು ಶಾಂತಾರಾಮನಿಗೂ ಕಂಡಿತು.

ತುಸು ಹೊತ್ತಿನಲ್ಲಿ ಕಾಡು ಬರಿದಾಯಿತು. ಹೊತ್ತು ನೆತ್ತಿಗೆ ಮುಟ್ಟಿತು. ಕಿಟ್ಟು, ಬೆಟ್ಟದ ಆ ದಾರಿಬಿಟ್ಟು, ನೇರಾಗಿ ಮೇಲಕ್ಕೇರತೊಡಗಿದನು. ಕಾಡು ಹುಲ್ಲುಗಳೇ ಕೈಗೆ ಆಧಾರವು. ಕೆಳಗೆ ನೋಡಿದರೆ ಪರಿಣಾಮವೇ ಇಲ್ಲ. ಗೋಡೆಯನ್ನು ಏರಿದಂತಿತ್ತು ಆ ಪಯಣ! ಏರಿದರು, ಏರಿದರು. ಕೊನೆ ಮೊದಲೇ ಇಲ್ಲ. ಶಾಂತಾರಾಮನ ಬೊಜ್ಜೆಲ್ಲಾ ಕರಗಿತು. ಬಾಯಾರಿಕೆ ಯಿಂದ ಏನೇನೂ ಕೂಡದಾಯಿತು. ಇವರು ಬರುವರೆಂದು ಅಲ್ಲಿ ಅರವಟ್ಟಿಗೆ

ಇಟ್ಟಿರುವರೇ? ಕೆಲವು ಬಾರಿ, ಮೋಡಗಳೇ ಕೈಗೆ ಸಿಗುವುವು ಆದರೇನು? ಮೋಡವನ್ನು ತಿಂದು ತೃಷೆ ಹಿಂಗಿದುದುಂಟೇ?

ಅಂತು, ಪಡೆಯು ಮಧ್ಯಾಹ್ನದ ಹೊತ್ತಿಗೆ, ಬೆಟ್ಟವನ್ನೇರಿ, ಒಂದು ಪುಟ್ಟ ಕಣಿವೆಗೆ ಬಂದಿತು. ಅದರ ಎರಡು ಪಕ್ಕದಲ್ಲೂ ದ್ವಾರಪಾಲಕರಂತೆ ನಿಂತ ಮೊನಚಾದ ಬೆಟ್ಟಗಳು. ಅವುಗಳ ನಡುವಿನಲ್ಲಿ ಸೇನೆಯು ಸಾಗಿತು ತುಸು ಹಾದಿ ಕಳೆದೊಡನೆಯೇ ಒಂದು ಬಯಲೂ, ಅದರಲ್ಲೊಂದು ಮನೆಯೂ ಕಾಣಿಸಿದುವು. ಶಾಂತಾರಾಮನು–'ಇಂದಿನ ಪಯಣವು ಇಲ್ಲಿಗೆ ಸಾಕು' ಎಂದನು. ಅಬ್ದುಲನು—"ಕಿಟ್ಟು, ಇವತ್ತೇ ಬೆಟ್ಟದ ತುದಿಯನ್ನು ಸೇರದಿದ್ದರೆ ನಮ್ಮ ಶೌರ್ಯಕ್ಕೆ ಕುಂದೇ ಸರಿ!" ಎಂದನು ಶಾಂತಾರಾಮನ ಕೋಪ ಅಷ್ಟಿಷ್ಟಲ್ಲ. "ಸುಮ್ಮನಿರು" ಎಂದು ಆಜ್ಞೆಯಿತ್ತನು. ದಳನಾಯಕನ ಆಜ್ಞೆಗೆ ಬದಲುಂಟೇ?

ಆ ದಿನ ಪಡೆಯು ಅಲ್ಲೇ ನಿಂತಿತು. ಊರಿನ ಹೆಸರು ಹೇವಳವೆಂದು. ಅಲ್ಲಿನ ಚೆಲುವನ್ನು ಬಣ್ಣಿಸಿತೀರದು. ಅಲ್ಲಿ ಮಕ್ಕಳು ನಿತ್ಯವೂ ಮೋಡದೊಡನೆ ಮಾತನಾಡಬಹುದು. ಅವುಗಳನ್ನೇ ಹೊದ್ದುಕೊಂಡಿರಬಹುದು. ಅಲ್ಲಿರುವುದು ಒಂದೇ ಒಂದು ಮನೆ. ಆ ಮನೆಯ ಅಂಗಣದಲ್ಲಿ ಪಡೆಯು ಇಳಿದುಕೊಂಡಿತು. "ಗೋಪಾಲ, ಅಡುಗೆ ಬೇಗ ಆಗಲಿ"–ಎಂದು ದಳನಾಯಕನು ಅಪ್ಪಣೆಕೊಡಿಸಿ ಮಲಗಿಕೊಂಡನು. ಮೂರು ತಾಸುಗಳ ಬಳಿಕ ಎಲೆಬಡಿಸಿದರು. ದಳನಾಯಕನ ಘೋರನಿದ್ರೆಗೆ ಭಂಗವಾಯಿತು. ಅಂತು ಎದ್ದು ಊಟವನ್ನು ಮುಗಿಸಿದನು. ವನಜೀವನವು ಆ ಬಾಲಕರ ಪಾಲಿಗೆ ತೀರ ನವೀನವಾಗಿತ್ತು. ಅದರಲ್ಲೂ ದಳನಾಯಕನು ಪಟ್ಟಣವನ್ನು ಬಿಟ್ಟು ಬೆಟ್ಟವನ್ನು ಮುಟ್ಟಿದವನಲ್ಲ.

ಆ ದಿನವೆಲ್ಲಾ ಹೇವಳದಲ್ಲಿಯೇ ಕಳೆಯಿತು. ಮರುದಿನ ತಿರುಗಿ ಪಯಣ, ಕುದುರೆಯ ಮುಖವನ್ನು ಮುದ್ದಿಡಲು. ಹಿಂದಿನ ದಿನದ ಕಷ್ಟಗಳೇ ಬೆಂಗಾವಲಾದುವು. ಅನುಭವಿಸಿ ಅನುಭವಿಸಿ ಕೊನೆಗೂ ಶಿಖರವನ್ನು ಸೇರಿದರು. ಆ ಶಿರೋಭೂಮಿಯಲ್ಲಿ ಕಾಲಿಡಲು ಸ್ವರ್ಗದ ಅನುಭವವೇ ಉಂಟಾಯಿತು. ಬೆಳಗಾಯಿತೆಂದರೆ ನಾಲ್ಕು ಸುತ್ತ, ಬಿಳಿ ಮೋಡಗಳ

ಕಡಲಲ್ಲಿ, ತಲೆಯೆತ್ತಿ ಮೆರೆಯುವ ನೀಲ ಗಿರಿಶಿಖರಗಳು! ಮಧ್ಯಾಹ್ನ ವಾಗಲು — ಬೆಚ್ಚಗಿನ ಬಿಸಿಲು; ಮೃದುವಾಗಿ ಬೀಸುವ ತಂಗಾಳಿ. ಸಂಜೆ ಯಾಯಿತೆಂದರೆ–ದಿಗಂತದಲ್ಲಿ ತೆರತೆರನಾಗಿ ಬೆಳಗುವ ಸೂರ್ಯ! ಬಾಲಕರು ಅಲ್ಲಿಗೆ ಬಂದು ಮನೆಯನ್ನೂ ಮರೆತರು, ಮಠವನ್ನೂ ಮರೆತರು. ತಾವಾರೋ, ಹಿಂದುಮುಂದಿಲ್ಲದ ಹೂವುಗಳು. ಈ ಗಿರಿರಾಜನ ತಲೆಯ ಮೇಲೆ ಗಾಳಿಗೆ ಬಂದು ಕುಳಿತಿರುವೆವು ಎಂದು ತಿಳಿದರು. ಅಲ್ಲಿನ ಗಿಡಗಳ ರಾಶಿ. ಒಂದೆರಡು ಹಾಳಾದ ಬಂಗಲೆಗಳ ಬಳಿ ಇನ್ನೂ ಅರಳಿ ಶೋಭಿಸುತ್ತಿರುವ ಪುಷ್ಪರಾಜಿ. ಶೀತಳವಾಗಿ ಹರಿಯುವ ಆ ಪುಟ್ಟ ಜೋಗು! ಅವೆಲ್ಲ ಉಂಡಷ್ಟು ಸಾಲದ ಊಟ ಗಳಾದುವು. ಈ ಹರುಷವನ್ನು ಉಂಡು, ಶಾಂತಾರಾಮನು ಸಹ ತನ್ನನ್ನು ಮರೆತು ಗೆಳೆಯರೊಡನೊಂದಾಗಿ ಬೆರೆತನು. ತಪಸಿಗಳು ಸಹ ಈ ಸೌಂ ದರ್ಯವನ್ನು ಒಂಟಿಯಾಗಿ ಅನುಭವಿಸಲಾರರು.

ಆದರೆ ಸುಖದ ಸುಗ್ಗಿಯಲ್ಲಿ, ದುಃಖದ ಬೇರೊಂದು ಊರಿತು. ಶಾಂತಾರಾಮನಿಗೆ, ದಣಿವಿನಿಂದಲೋ, ಹವೆಯ ಪರಿವರ್ತನೆಯಿಂದಲೋ ಮೆ ಬಿಸಿಯಾಯಿತು. ಬಂದ ಮೂರನೆಯ ದಿನಕ್ಕೆ ಕಾಲುಸಿಡಿತ ಜ್ವರಗಳು ಬಲ ವಾಗಿ ಅಂಟಿದುವು. ಅಬ್ದುಲನನ್ನು ಒಮ್ಮೆ ಬಳಿಗೆ ಕರೆದನು. "ಅಬ್ದುಲ– ಕಾಲುಸಿಡಿಯುತ್ತದೆ"–ಎಂದನು. ಅದಕ್ಕವನು "ನಾನೇನು ಮಾಡಲಿ?"– ಎಂದನು. "ಸ್ವಲ್ಪ, ಸವರುವೆಯಾ?"—ಎಂದು ಮೃದುವಾಗಿ ನುಡಿದನು. "ನಾನು ನಿನ್ನ ಆಳೇ?"–ಎಂದನು ಅಬ್ದುಲ. ಹಿಂದಿನ ಉರಿಯಿಂದ ಅವನು ಆಡಿದ ಮಾತಿದು. ಕಿಟ್ಟುವಿಗೆ ಕೇಳಿಸಿತು. ಅವನಲ್ಲಿಗೆ ಬಂದನು. ಆಗ, ನಾಚುಗೆ ಯಿಂದ, ಶಾಂತಾರಾಮನು ಮುಖತಿರುಗಿಸಿ ಮಲಗಿಕೊಂಡನು. ಕಿಟ್ಟುವು, ಮೆಲ್ನಗುವೊಂದನ್ನು ನಕ್ಕು–"ಅಬ್ದುಲ, ಈಗ ಬೇಡ ನಿನ್ನ ಹಗೆ"–ಎಂದನು. ಶಾಂತಾರಾಮನ ಪರಿಸ್ಥಿತಿಯನ್ನು ಕಂಡು ಇತರ ಬಾಲಕರಿಗೆ ಆನಂದವೇ ಆಯಿತು. ಆದರೆ ಅವನ ನರುಳುವಿಕೆಯನ್ನು ಕಂಡು ಕನಿಕರವಾಯಿತು. ಕಿಟ್ಟುವನ್ನು ಮೊದಲುಗೊಂಡು ಎಲ್ಲರೂ ಅವನನ್ನು ಉಪಚರಿಸತೊಡಗಿದರು. ಅಬ್ದುಲನೂ ಕಿಟ್ಟುವೂ ಅವನ ಹಾಸುಗೆಯನ್ನು ಬಿಡಲಿಲ್ಲ. ನಾಲ್ಕನೆಯ ದಿನ ಶಾಂತಾರಾಮನಿಗೆ ತುಸು ಆರೋಗ್ಯವಾಯಿತು. ಅದನ್ನು ಕಂಡು

ಕಿಟ್ಟುವು "ಯಾತ್ರೆಯು" ಸಾಕೆಂದು ನಿರ್ಧರಿಸಿದನು ಉಳಿದವರಿಗೆ ಹಾಗೆ ಮನವಿರಲಿಲ್ಲ. ರಜೆಯೆಲ್ಲವೂ ಅಲ್ಲೇ ಕಳೆಯಲಿ ಎಂಬ ಆಸೆ ಅವರದು. ಆದರೆ ಶಾಂತಾರಾಮುನ ಸ್ಥಿತಿಯನ್ನು ಕಂಡು ಒಪ್ಪಿದರು. ಇತ್ತ ಶಾಂತಾ ರಾಮುನು ಕಿಟ್ಟುವಿನೊಡನೆ—"ನನ್ನಿಂದ ನಡೆಯಲಾದೀತೇ?"—ಎಂದನು. ಕಿಟ್ಟುವು—"ಆ ಚಿಂತೆ ನಿನಗೇಕೆ?"–ಎಂದನು. ಪಯಣ ತೊಡಗಿತು. ಶಾಂತಾರಾಮುಗೆ ತನ್ನನ್ನೇನು ಮಾಡುವರೆಂಬ ವಿಶ್ವಾಸವಿಲ್ಲ. "ಬಂಡಿ ದಾರಿಯಲ್ಲ. ತನಗೆ ನಡೆಯಲು ಸಾಧ್ಯವಿಲ್ಲ. ಬಿಟ್ಟುಹೋದರೇನು ಗತಿ?" —ಎಂಬ ಕಳವಳವಾಯಿತು. "ಬಿಟ್ಟುಹೋಗಬೇಡಿರಿ"—ಎಂದು ಬೇಡಲು ಬಾಯಿಬರಲಿಲ್ಲ. ಅಳುತ್ತ ಕುಳಿತನು. ಕಿಟ್ಟುವು ಅಲ್ಲಿಗೆ ಬಂದನು. "ಶಾಂತಾ, ಅಳುವುದೇಕೆ?"–ಎಂದು ಕೇಳಿದನು. "ನನ್ನನ್ನು. . ." ಎಂದಿಷ್ಟೇ ಮಾತು ಅವನ ಬಾಯಿಯಿಂದ ಹೊರಟಿತು. ಕಿಟ್ಟುವಿಗೂ ದುಃಖವಾಯಿತು. ಅವನೂ ಕಂಬನಿ ಕರೆದನು. ಕೊನೆಗೆ ಗೆಳೆಯನ ಕಣ್ಣೀರನ್ನು ಒರಸಿ, ತಾನೂ ಅಬ್ದುಲನೂ ಸೇರಿ, ತಮ್ಮ ದೊಣ್ಣೆ ಕಂಬಳಿಗಳಿಂದ, ಪುಟ್ಟ ಮಂಚಲು ಒಂದನ್ನು ಮಾಡಿ ಶಾಂತಾರಾಮುನನ್ನು ಹೊತ್ತರು.

ಒಂದೇ ದಿನದಲ್ಲಿ, ಎಲ್ಲರ ಸಾಹಸದಿಂದ, ಶಾಂತಾರಾಮುನು ಬೆಟ್ಟದ ಬುಡವನ್ನು ಸೇರಿದನು. ಮರುದಿನ ಮಧ್ಯಾಹ್ನವಾಗುವುದರೊಳಗೆ ಶಾಂತಾ ರಾಮುನು ತಿರುಗಿ ಮಂಗಳೂರಿನಲ್ಲಿದ್ದನು. ಅಂದಿನಿಂದ ಅವನು ನಿಜವಾದ ಶಾಂತಾರಾಮುನಾದನು. ಕಿಟ್ಟು ಈಗಲೂ ಆಡುವುದುಂಟು: ಇನ್ನವನನ್ನು "ಸಿಟ್ಟಾರಾಮು"ನೆಂದು ಕರೆಯುವ ಎಂದು.

---

## ೮. 'ನನ್ನಿಂದಾಗದು!'

ಸಂಜೀವರಾಯರಿಗೆ ಸ್ವಂತ ಮಕ್ಕಳಿಲ್ಲ. ಹೇರಳ ಆಸ್ತಿಯಿತ್ತು. ಮಡದಿಯೂ ಇದ್ದಳು. ಆದರೆ ಅವರ ಲಲಾಟದಲ್ಲಿ ಸಂತತಿಯು ಬರೆದಿರಲಿಲ್ಲವೆಂದು ಕಾಣುತ್ತದೆ. ಅದರಿಂದ ಸಂಪತ್ತಿದ್ದರೂ, ಅವರ ಜೀವನದಲ್ಲಿ ಸುಖವಿದ್ದಿರಲಿಲ್ಲ. ಪ್ರತ್ಯಕ್ಷ ಸಂಕಟಗಳು ಅವರ ಪಾಲಿಗೆ ಬಂದುದನ್ನು ನಾವೆಲ್ಲಿಯೂ ಕಾಣಲಿಲ್ಲ. ಆದರೆ ಅವರು ಕೊರಗುತ್ತಿರುವುದಕ್ಕೆ ಮಿತಿಯಿಲ್ಲ. ಅವರ ಕಲ್ಪನೆಯ ದುಃಖಗಳೇ ಅವರಿಗಧಿಕ. ಯಾವಾಗ ನೋಡಿದರೂ ಅವರ ಮುಖವು ಕಳೆಗುಂದಿಯೇ ಇರುವುದು. ಗೆಳೆಯರು ಅವರನ್ನು ಕಂಡು— "ಏನು ರಾಯರೇ, ಏನು ಚಿಂತೆ?"—ಎಂದು ಕೇಳಿದರೆ "ಇದ್ದೇ ಇದೆಯಲ್ಲ ನಮ್ಮ ಹಣೆಯ ಬರಹ"–ಎಂದು ಹೇಳುವರು. ಆದರೆ ಆ ಹಣೆಯ ಬರಹವೇನೆಂದು ಇತರರು ಓದಿತಿಳಿಯಲು ಸಾಧ್ಯವಾಗಲೂ ಇಲ್ಲ. ತಾವೂ ಓದಿಕೊಳ್ಳಲಿಲ್ಲ. ಅವರ ದುಃಖದಲ್ಲಿ, ಚಿಂತೆಯಲ್ಲಿ, ಬೇಸರದ ಜೀವನದಲ್ಲಿ ಸಹಧರ್ಮಿಣಿಯೆಂದರೆ ತಾರೆ. ತಾರೆಗೆ ನಾಲ್ವತ್ತು ವಯಸ್ಸು; ರಾಯರಿಗೆ ಐವತ್ತು ವಯಸ್ಸು ರಾಯರು ಜಗುಲಿಯ ಕಂಭಕ್ಕೆ ಒರಗಿ ಮುಖತಗ್ಗಿಸಿ ಕುಳಿತರೆ, ಅವರ ಇದಿರಿನಲ್ಲಿಯೇ ತಾರೆಯೂ ಕುಳಿತುಬಿಡುವಳು. ಅವರು ನಿಟ್ಟುಸಿರು ಬಿಟ್ಟರೆ, ಇವಳಿಗೂ ನಿಟ್ಟುಸಿರು ಬರುವುದು. ಅವರು ಅಸಂತೃಪ್ತಿಯಿಂದ ತಮ್ಮಷ್ಟಕ್ಕೆ ಮುಖವಾಡಿಸಿದರೆ ತಾರೆಯೂ ಅದೇ ಬಗೆಯಲ್ಲಿ ತಲೆದೂಗುವಳು. ಅವರು ಉಸ್ಸೆಂದು ಮೆಲ್ಲಗೆ ಎದ್ದರೆ ತಾರೆಯೂ ತದ್ ವ್ಯವಸಾಯದವಳು! ಏಕೆ ಹೀಗೆ ಮಾಡುತ್ತಿರುವಳೆಂದು ಅವಳಿಗೂ ತಿಳಿಯದು. ತಮ್ಮ ದುಃಖವೇನೆಂದು ತಿಳಿಯುವ ಸಾಮರ್ಥ್ಯ ಅವರುಭಯತರಿಗೂ ಇದ್ದಿಲ್ಲವೆಂದು ಕಾಣುವುದು.

ಒಂದು ದಿನ ಅವರ ಮನೆಗೆ ಪುರೋಹಿತ ನಾರಾಯಣ ಭಟ್ಟರು ಬಂದರು. ಅವರು ಕಾಲಿಡುವಾಗ ಎರಡು ಕಂಭಗಳಿಗೆ ಒರಗಿ ದಂಪತಿಗಳೀರ್ವರು ಕುಳಿತಿದ್ದರು. ದೊಡ್ಡದೊಡ್ಡ ಉಸಿರು ಇಬ್ಬರ ಮೂಗಿನಿಂದಲೂ

ಹೊರಟಿತು. ಭಟ್ಟರು ಗಟ್ಟಿಯಾಗಿ–"ಏನು, ರಾಯರಿಗೆ ವೈನೆಟ್ಟಗಿಲ್ಲವೆ?" ಎಂದು ಕೇಳಿದರು. ನಿದ್ರೆಯಿಂದೆಚ್ಚೆತ್ತವರಂತೆ ರಾಯರು "ಆಂ" ಎಂದರು. ತಾರೆ "ಆಂ" ಎಂದು ಮಾರ್ದನಿಗೊಟ್ಟಳು. ಭಟ್ಟರು—"ಸ್ವಾಮಿ, ಇದೇನು ಹೀಗೆ ಖಿನ್ನರಾಗಿದ್ದೀರಿ?" ಎಂದು ಕೇಳಲು—"ಇದ್ದೇ ಇದೆಯಲ್ಲ ನಮ್ಮ ಹಣೆಯ ಬರಹ"—ಎಂದು ಪ್ರಶ್ನೆ. "ಏನು ಹಣೆಯ ಬರಹ? ಯಾವ ವಿಚಾರ ಯೋಚಿಸುತ್ತಿರುವಿರಿ?"–ಎಂದರು. "ಯಾವ ವಿಚಾರವೆಂದರೇನು? ಇದ್ದೇ ಇದೆಯಲ್ಲ ನಮ್ಮ ಹಣೆಯ ಬರಹ"ವೆಂದರು. ನೂರು ಬಾರಿ ಆ ಪ್ರಶ್ನೆಯನ್ನು ಕೇಳಿದರೂ ಬೇರೆ ಉತ್ತರ ಬರುತ್ತಲಿದ್ದಿಲ್ಲ. ಭಟ್ಟರು–"ಏನು, ಮಕ್ಕಳ ಸಲುವಾದ ಚಿಂತೆ . . . .ಯೆಂದು ಕಾಣುತ್ತದೆ" ಅಂದರು. ಇಬ್ಬರೂ "ಆಂ"–ಎಂದರು. ಅದೇ ಚಿಂತೆ ಇದ್ದರೂ ಇರಬಹುದೆಂದು ಕಾರಣವರಿಯದ ಅವರಿಗೂ ಹೊಳೆಯಿತು. ಭಟ್ಟರು ತಾವಾಗಿ ಕುಳಿತುಕೊಂಡರು. "ತಾವು ಈ ರೀತಿ ಹಗಲಿರುಳು ಯೋಚಿಸುತ್ತ ಕುಳಿತಿರುವ ಬದಲು, ಒಂದು ದತ್ತು ವನ್ನೇಕೆ ಮಾಡಿಕೊಳ್ಳಬಾರದು?"—ಎಂದು ಹೇಳಿದರು. ದಂಪತಿಗಳಿಬ್ಬರು "ಅಂ . . ." ಎಂದರು. ಅವರ ಚಿಂತೆ ಮುಗಿದಿರಲಿಲ್ಲವೆಂದು ಕಾಣುತ್ತದೆ. ಭಟ್ಟರು ಪುರಾಣ ಬಿಚ್ಚಿದರು. ಅವರಿಂದು ಒಂದು ಹೊಸ ವಕಾಲತು ಹಿಡಿದು ಅಲ್ಲಿಗೆ ಬಂದಿದ್ದರು. ಸಂಜೀವರಾಯರ ದೂರದ ಸಂಬಂಧಿಯೊಬ್ಬರಿರುವರು. ಅವರಿಗೆ ಜೀವನಕ್ಕೆ ಹಾದಿಯಿರಲಿಲ್ಲ. ಆದರೆ ಸಂತತಿ ಮಾತ್ರ ಯಥೇಷ್ಟ ವಾಗಿತ್ತು. ಯಥೇಷ್ಟ ಅಷ್ಟೇ ಅಲ್ಲ, ಅದಕ್ಕೂ ಸ್ವಲ್ಪ ಹೆಚ್ಚು. ಅವರು ಒಂದು ಸೂಚನೆಯನ್ನು ಭಟ್ಟರ ಮುಖಾಂತರ ಮಾಡಲು ಹೇಳಿದ್ದರು. ತಮ್ಮ "ಕಿರಿಹುಡುಗ ದತ್ತಾತ್ರೇಯನನ್ನು ದತ್ತು ತೆಗೆದುಕೊಳ್ಳುವಿರಾ?"—ಎಂದು ಕೇಳಲು ಕಳುಹಿಸಿದ್ದರು. ಭಟ್ಟರು ತಾವು ಕಾಣದ ಆ ಕಿರಿಹುಡುಗನ ವಿಚಾರ ತುಂಬಾ ಹೊಗಳಿಹೇಳಿದರು. "ಮನೆಯಲ್ಲಿ ಮಕ್ಕಳ ನಗುವಿಲ್ಲದಿದ್ದರೆ ಅದೊಂದು ಮಸಣದಂತೆಯೇ ಸರಿ . . ."—ಎಂದರು. ಸಂಜೀವರಾಯ ರಿಗೂ ತಾರೆಗೂ ಅಹುದೆಂದು ಕಂಡಿತು.

ಒಂದು ತಿಂಗಳ ಅವಧಿಯೊಳಗಾಗಿ ಸಂಜೀವರಾಯರ ಮನೆಯಲ್ಲಿ ದತ್ತುಮಗನೊಬ್ಬನು ಸೇರಿಕೊಂಡನು. ದತ್ತಾತ್ರೇಯಗೆ ಆಗ ಹದಿಮೂರು

ವಯಸ್ಸು. ಅವನಿಗೆ ಆರು ಮಂದಿ ಅಣ್ಣಂದಿರಿದ್ದರು. ಅವರೆಲ್ಲರೂ ಚುರು ಕಿನ ಹುಡುಗರೇ. ದತ್ತಾತ್ರೇಯ ಇವರೆಲ್ಲರಿಗಿಂತ ಚಟುವಟಿಕೆಯವನು. ಓದಿನಲ್ಲಾಗಲಿ, ಆಟದಲ್ಲಾಗಲಿ ಅವನ ಮಿಗಿಲಿಲ್ಲ. ಮುಖಕಾಂತಿಯೂ ಅಷ್ಟಿತ್ತು. ಸಂಜೀವರಾಯರಿಗೂ ತಾರೆಗೂ ಈ ಮಗುವನ್ನು ಕಂಡು ಆನಂದ ವಾಯಿತು. ಸದಾ ಅವನ ಬಳಿ ಸಮಯ ಕಳೆಯತೊಡಗಿದರು. ರಜಾ ವೇಳೆಯಾದುದರಿಂದ ದತ್ತುವಿಗೂ ಅದೊಂದು ಕಠಿಣವಾಗಿ ಕಾಣಿಸಲಿಲ್ಲ. ಶಾಲೆತೆರೆಯಲು ಶಾಲೆಗೆ ಹೋಗತೊಡಗಿದನು. ಅವನಿಗೆ ಹಿಂದಿನ ಒಡನಾಡಿ ಗಳ ಚೈತನ್ಯಮಯ ಗೆಳೆತನವು ತಪ್ಪಿತು. ಬದಲು ಹಗಲಿರುಳು ತನ್ನನ್ನು ಬಯ ಸುವ ತಂದೆತಾಯಿಗಳು ದೊರೆತರು. ಶಾಲೆ ಬಿಟ್ಟೊಡನೆ ಮನೆಗೆ ಬರ ಬೇಕು. ಮಾತನಾಡುವ ಹವ್ಯಾಸವಿಲ್ಲದ ಹಿರಿಯರ ಮುಂದೆ ಕೈಕಟ್ಟಿ ಕುಳಿ ತಿರಬೇಕು. ಎಲ್ಲಾದರೂ ಹೊರಟರೆ—"ಬೇಡ ಮಗು, ಮಳೆದಿನ; ಬಿದ್ದು ಬಿಟ್ಟೀಯಾ" ಅನ್ನುವರು. ಮಳೆಗಾಲದ ನಾಲ್ಕು ತಿಂಗಳು ಕಳೆಯುವುದ ರಲ್ಲಿ ದತ್ತನು ಅವರ ನಿಜವಾದ ಸಾಕುಮಗನಾದನು. ಅದರಂತೆಯೇ ಇವನ ಉತ್ಸಾಹದ ಪರಿಣಾಮವಾಯಿತು. ಸದಾ, ಇವನ ಮೋರೆಯ ಮೇಲೆ ಉಕ್ಕುತ್ತಿದ್ದ ನಗುವೆಲ್ಲ ಮಾಯವಾಗಿ, ಇವನೂ ಹಣೆಯ ಬರಹವನ್ನು ಎಣಿಸ ತೊಡಗಿದಂತೆ ಕಂಡಿತು.

ರಾತ್ರಿ ಓದುತ್ತ ಕುಳಿತರೆ ತಾಯಿ ಬರುವಳು—"ದತ್ತು, ಮಲಗಿಕೋ ಅಪ್ಪ; ಜಾಸ್ತಿ ನಿದ್ರೆಬಿಟ್ಟರೆ ಪಿತ್ಥೋದ್ರೇಕವಾಗುವುದು"–ಎನ್ನುವಳು. ಸ್ವಲ್ಪ ಹೊರಕ್ಕೆ ತಿರುಗಾಡಲು ಹೋದರೆ-"ಮಗು, ಬರಿ ತಂಗಾಳಿ, ಶೀತವಾದೀತು"– ಎನ್ನುವಳು. ನದಿಗೆ ಸ್ನಾನಕ್ಕೆ ಹೊರಟರೆ–"ಮಗು, ಮುಣುಗಿಬಿಟ್ಟೀಯಾ"– ಎನ್ನುವಳು. ಅದರಂತೆಯೇ ಅವನ ಮನೋವೃತ್ತಿಯು ಫಲಿಸಿತು. ಚಿಕ್ಕಂದಿ ನಲ್ಲಿ ಅವನು ಬೇಕಷ್ಟು ಕುಣಿದವನು. ಆದರೆ ಅವನಿಗೀಗ ಏನುಮಾಡು ವುದಕ್ಕೂ ಅಂಜಿಕೆ.

ಒಂದು ದಿನ ಗೆಳೆಯರ ಬಲವಂತದಿಂದ ಊರಕೆರೆಗೆ ಈಜಾಡಲು ಹೋದನು. ತೀರ ಸಣ್ಣವನಿರುವಾಗಿನಿಂದಲೂ ಅವನು ಈಜಾಡಿದ ಕೆರೆ. ಅಲ್ಲಿಗೆ ಬಂದೊಡನೆಯೇ ಗೆಳೆಯನೊಬ್ಬನು--"ದತ್ತು, ಯಾರು ಹೆಚ್ಚಿಗೆ

ಇದರ ಸುತ್ತು ಈಜಾಡುವರು ನೋಡುವ"—ಎಂದನು. ದತ್ತನು "ನನ್ನಿಂದಾಗದಪ್ಪ"—ಎಂದನು. ಬರೇ ಆರು ತಿಂಗಳ ಕೆಳಗೆ ತಾಸುತಾಸುಗಳ ತನಕ ಈಜಾಡುತ್ತಿದ್ದುದನ್ನು ಕಂಡ ಅವನ ಗೆಳೆಯರು ಅವನ ಚೇಷ್ಟೆಯಿದೆಂದು ತಿಳಿದು ಬಲವಂತದಿಂದ ಅವನನ್ನು ನೀರಿಗೆಳೆದೊಯ್ದರು. ದತ್ತು "ನನ್ನಿಂದಾಗದು" ಎನ್ನುತ್ತಲೇ ಇದ್ದನು. ಸರಿ, ಉಳಿದ ಗೆಳೆಯರು ಈಜುವುದನ್ನು ಕಂಡು ಇವನೂ ಈಜತೊಡಗಿದನು. ಎರಡು ಸುತ್ತು ಬರುವುದರಲ್ಲಿ "ನನ್ನಿಂದಾಗದು"—ಎಂದು ತೋರಿತು. ಕೈಗಳ ಗತಿ ನಿಧಾನವಾಯಿತು. ಮುಂದಾಗಿ ಹೊರಟವನು ಹಿಂದೆ ಬೀಳತೊಡಗಿದನು. ಉಳಿದ ಬಾಲಕರು ಐದು ಸುತ್ತು ಬರುವುದರೊಳಗೆ ಇವನಿಂದ ಮೂರು ಸುತ್ತುಗಳೂ ಪೂರ್ಣವಾಗಲಿಲ್ಲ. ಹಾಗೆ ಈಜಾಡುತ್ತಿರುವಾಗ ಇನ್ನು ಮುಂದೆ ಈಜಾಡುವುದೇ ತನ್ನಿಂದಾಗದು ಎಂದು ತಿಳಿದನು. ನಿಜವಾಗಿಯೂ "ನನ್ನಿಂದಾಗದೆಂದೇ" ತೋರಿತು. ಕೈಕಾಲುಗಳನ್ನು ಬಡಿಯತೊಡಗಿದನು. ಸಹಾಯಕ್ಕಾಗಿ ಕೂಗಿ ಮುಣುಗಿಬಿಟ್ಟನು. ಇವನ ಕೂಗನ್ನು ಕೇಳಿ ಇತರ ಬಾಲಕರು ಅವನನ್ನು ಕಂಡರು. "ಓಹೋ, ದತ್ತು! ನಮ್ಮಂಥವರು ನೂರು ಜನರಿಗೆ ನೀರು ಕುಡಿಸಿಯಾನು"—ಎಂದರು. ಆದರೆ ದತ್ತನು ನಿಜವಾಗಿಯೂ ಪ್ರಾಣಕ್ಕಾಗಿ ಬಡಿದಾಡುತ್ತಿದ್ದನು. ಅಲ್ಲೀ ಬಟ್ಟೆ ಒಗೆಯುತ್ತಿದ್ದ ಪರಸ್ಥಳಿಕನೊಬ್ಬನು ನೀರಲ್ಲಿ ಧುಮುಕಿ ದತ್ತುವನ್ನು ಮೇಲಕ್ಕೆ ತಂದನು. ಸ್ಮೃತಿ ಬಂದೊಡನೆಯೇ ಅವನು—"ನನ್ನಿಂದಾಗದೆಂದರೂ ಇವರು ಬಲವಂತಪಡಿಸಿದರು"—ಎಂದನು. ಅವನ ಗೆಳೆಯರಿಗೆ ಆಶ್ಚರ್ಯವಾಯಿತು. ಅವರಲ್ಲಿ ಒಬ್ಬಿಬ್ಬರು ಇದು ನಿಶ್ಚಯಕ್ಕೂ ದತ್ತನ ಠಕ್ಕು ಸೋಗು ಎಂದು ತಿಳಿದರು.

ಇನ್ನೊಂದು ದಿನ, ರಾಯರ ಮನೆಯ ಹಿತ್ತಿಲಿನಲ್ಲೇ ದತ್ತುವು ಕೆಲವು ಗೆಳೆಯರೊಡನೆ ಆಟವಾಡುತ್ತಿದ್ದನು. ಅವನ ಇಬ್ಬರು ಗೆಳೆಯರು, ತೆಂಗಿನ ಮರವನ್ನೇರುವ ಸ್ಪರ್ಧೆ ಹಿಡಿದರು. ಇಬ್ಬರು ಎರಡು ಮರಗಳನ್ನು ಏರಿದರು. ದತ್ತುವು ನೋಡುತ್ತಿದ್ದನು. ಉಳಿದ ಗೆಳೆಯರಿಗೆ ಉತ್ಸಾಹವಾಗಿ ಅವರೂ ಏರಿದರು. ಅದನ್ನು ಕಂಡು ದತ್ತುವು ಒಂದು ಮರದ ಬಳಿಗೋಡಿದನು. ಅಷ್ಟರಲ್ಲಿ ಅವನ ತಾಯಿಯು ಅಲ್ಲಿಗೆ ಬಂದಳು. ಆಗ ದತ್ತು ನಾಲ್ಕು ಅಡಿ

ಮೇಲಕ್ಕಿದ್ದನು. ತಾರೆಯು—“ಮಗು, ನಿನ್ನಿಂದಾಗದಪ್ಪ”—ಎಂದಳು. ದತ್ತು ವಿಗೆ ಕೇಳಿಸಿತು. “ನನ್ನಿಂದಾಗದೆ”ಂದು ಕೈಬಿಟ್ಟುಬಿಟ್ಟನು. ನೆಲಕ್ಕುರುಳಿದನು. ಏಟು ಬಲವಾಯಿತು. ತಾಯಿ ಬೊಬ್ಬಿಟ್ಟಳು. ಹದಿನೈದು ದಿನಗಳು ಹಿಡಿದುವು, ತಿರುಗಿ ಅವನು ಸ್ವಾಸ್ಥ್ಯನವನ್ನು ಹೊಂದಲು. ತಾರೆಯು ಆ ಸಮಯದಲ್ಲಿ ಸದಾ ಅವನ ಬಳಿಗೆ ಬಂದು—“ಮಗು, ನಿನ್ನಿಂದಾಗದೆಂದು ಸಾರಿ ಹೇಳಿದರೂ ಹತ್ತಿದೆ. ಫಲ ಹೀಗಾಯಿತು...”—ಎನ್ನುತ್ತಿದ್ದಳು. ದತ್ತುವಿಗೆ ತಾಯಿಯ ಮಾತೇ ನಿಜವೆಂದು ತೋರಿತು. “ಅಮ್ಮಾ, ಇನ್ನು ನನ್ನಿಂದಾಗದುದನ್ನು ಮಾಡೆನು”—ಎಂದು ವಚನವಿತ್ತನು.

ಇಂಥ ಎಷ್ಟೋ ಅನುಭವಗಳು ದತ್ತುವಿನದು. ಒಂದು ಚಿಕ್ಕ ಕೆಲಸವನ್ನು ಅವನೊಡನೆ ಹೇಳಿದರೂ ಅವನಿಂದಾಗುತ್ತಿರಲಿಲ್ಲ.

ಒಂದು ದಿನ ಅವನ ತರಗತಿಯವರಿಗೂ, ಮುಂದಿನ ತರಗತಿಯವರಿಗೂ ಕ್ರಿಕೆಟ್ ಸ್ಪರ್ಧೆಯಾಗುತ್ತಿತ್ತು. ಆಟಗಾರರಲ್ಲಿ ದತ್ತುವೂ ಒಬ್ಬನು. ಎಲ್ಲರೂ ಅತಿ ಉತ್ಸಾಹದಿಂದ ಆಡುತ್ತಿದ್ದರು. ಚೆಂಡು ಹಾರಿದಂತೆ ಪ್ರೇಕ್ಷಕಗಣವೂ ಹಾರುತ್ತಿತ್ತು. ಈಗ ದತ್ತನ ಆಟದ ಸರದಿಯು ಬಂದಿತು. ಎಲ್ಲರೂ ಅವನ ಬೆನ್ನನ್ನು ಚಪ್ಪರಿಸಿ ಕಳುಹಿಸಿಕೊಟ್ಟರು. ಆಟವನ್ನು ನೋಡುವುದರಲ್ಲಿ ಮೈಮರೆತ ದತ್ತು ಉತ್ಸಾಹದಿಂದ ಕುಣಿಕುಣಿದು ರಂಗಸ್ಥಳಕ್ಕೆ ಹೋದನು. ಬೇಟನ್ನು ಹಿಡಿದು ವೀರನಂತೆ ಎದೆಯೊಡ್ಡಿ ನಿಂತನು. ಸುತ್ತಲೂ ನೋಡಿದನು. ಕ್ಷೇತ್ರಪಾಲಕರೆಲ್ಲರ ಕಡೆಗೆ ದೃಷ್ಟಿ ಹರಿಯಿತು. ಚಂಡೆಸೆಯುವವನನ್ನು ನೋಡಿದನು . . . ಏಕೋ ಏನೋ, “ನನ್ನಿಂದಾಗದು” ಎಂದು ಅನಿಸಿತು. ಕೈ ಸ್ವಲ್ಪ ನಡುಗಿತೋ ಏನೋ, ಎದುರಿನ ಚಂಡು ಬಂದು, ಅವನ ಬೇಟನ್ನು ತಳ್ಳಿಕೊಂಡು “ವಿಕೆಟ”ಗೆ ಬಡಿಯಿತು. ದತ್ತನು ಮೊದಲನೆ ಪ್ರಹಾರಕ್ಕೇ “ಔಟಾ”ದನು! ತಿರುಗಿ ಅವನು ಕ್ರಿಕೆಟ ಆಟಕ್ಕೆ ಹೋಗಲೂ ಇಲ್ಲ. ಯಾರೊಬ್ಬರು ಅವನನ್ನು ಕರೆಯಲೂ ಇಲ್ಲ.

ಎರಡು ವರುಷಗಳ ಪರಿಶ್ರಮದಿಂದ ದತ್ತನು VI ಫಾರ್ಮಿಗೆ ಬಂದನು. ಇನ್ನೂ ಹೆಚ್ಚಿನ ಪರಿಶ್ರಮದಿಂದ ಪರೀಕ್ಷೆಗೆ ಸಜ್ಜುಗೊಳಿಸಿದನು. ಆಟವನ್ನು ಬಿಟ್ಟನು; ಕೆಲವು ಬಾರಿ ಊಟವನ್ನೂ ಬಿಟ್ಟನು. ಓದುವುದೊಂದೇ ಅವನ

ಹವ್ಯಾಸವಾಯಿತು. ತರಗತಿಯಲ್ಲಿ ಇವನ ವ್ಯಾಸಂಗವನ್ನು ಕಂಡ ಬಾಲಕರು, ಖಂಡಿತವಾಗಿಯೂ ಈ ಪರೀಕ್ಷೆಯಲ್ಲಿ ದತ್ತನು ಪ್ರಥಮ ಬರುವನು ಎಂದು ನಿಶ್ಚಯಿಸಿದರು

ಪರೀಕ್ಷೆಯ ಕಾಲ ಬಂದಿತು. ಎಷ್ಟೋ ದಡ್ಡ ಹುಡುಗರು ಅವನಿಂದ ಹಲವು ವಿಷಯಗಳನ್ನು ಕೇಳಿದರು. ಕಠಿಣವಾದ ಪ್ರಶ್ನೆಗಳ ಉತ್ತರವನ್ನು ಕೇಳಿಕೊಂಡರು. ಗಣಿತದಲ್ಲಿ ಅವರಿಗೆ ಅವನೇ ಗುರುವಾದನು. ಪರೀಕ್ಷೆಗೆ ಕುಳಿತೊಡನೆಯೇ ದತ್ತುವಿನ ಮುಖ ಸಪ್ಪಗಾಯಿತು. ಪ್ರಶ್ನಾವಳಿಯನ್ನು ಕಂಡು ದಿಗಿಲುಬಿದ್ದನು. ಅವನ್ನು ಉತ್ತರಿಸುವುದು "ನನ್ನಿಂದಾಗದು"–ಎಂದು ಸ್ಪಷ್ಟವಾಯಿತು. ಏನೇನೋ ಬರೆದು ಮನೆಗೆ ಬಂದನು. ಮಧ್ಯಾಹ್ನವೂ ಅದೇ ತೆರವಾಯಿತು. ಗಣಿತದ ಪರೀಕ್ಷೆ ಬರಲು ಮತ್ತಷ್ಟು ಅರಿಷ್ಟವೆನಿಸಿತು. ಪರೀಕ್ಷಾಮಂದಿರವನ್ನು ಸೇರುವ ಮೊದಲು ಕೆಲವು ಹುಡುಗರು ಒಂದೆರಡು ಕಠಿಣ ಲೆಕ್ಕಗಳನ್ನು ಮಾಡುವ ಬಗೆಯನ್ನು ಅವನಿಂದ ತಿಳಿದುಹೋಗಿದ್ದರು. ಆದರೆ ತಿರುಗಿ ಅದೇ ಲೆಕ್ಕಗಳನ್ನು ಕಂಡಾಗ, "ನನ್ನಿಂದಾಗದು" ಎಂದು ಅವನಿಗೆ ತೋರಿತು. ಎಂಟು ಲೆಕ್ಕಗಳನ್ನು ಕೊಟ್ಟಿದ್ದರು. ಒಂದೊದನ್ನೇ ಮಾಡುತ್ತ ನಡೆದನು. ಯಾವುದೊಂದಕ್ಕೂ ಉತ್ತರವೇ ಸಿಗಲಿಲ್ಲ.

ಪರೀಕ್ಷೆ ಕಳೆಯಿತು. ಫಲವೂ ಬಂದಿತು. ಅದರಲ್ಲಿ ದತ್ತುವಿನ ಮೇಲೆ ಆಸೆಯಿರಿಸಿದ್ದ ಉಪಾಧ್ಯಾಯರು ಮೋಸಹೋದರು. ಯಾವ ಪಾಠದಲ್ಲಿಯೂ ಅವನು ತೇರ್ಗಡೆಯಾಗಲಿಲ್ಲ. "ದತ್ತು, ಏನಿದು?"—ಎಂದು ಕೇಳಿದರು. "ನನ್ನ ಹಣೆಯ ಬರಹ"—ಎಂದುತ್ತರವಿತ್ತನು.

ಮೂರು ಬಾರಿ ಪರೀಕ್ಷೆಗೆ ತಿರುತಿರುಗಿ ಕುಳಿತನು. ಪರೀಕ್ಷಾಮಂದಿರವನ್ನು ಸೇರುವ ಗಳಿಗೆಗೆ ಆ "ನನ್ನಿಂದಾಗದು" ಅವನನ್ನು ಕಾಡುತ್ತಿತ್ತು. ಮೂರು ಬಾರಿಯೂ ಅವನು ನಿರಾಶನಾದನು. ಇನ್ನು ಮುಂದೆ ತನ್ನಿಂದ ಏನೂ ಆಗದೆಂದು ತೋರಿತು. ಪರೀಕ್ಷೆಯೂ ಆಗದು; ಕೆಲಸವೂ ಆಗದು. ಯಾವುದನ್ನೇ ಎಣಿಸಲಿ, ಅದು ಅವನಿಂದ ಆಗದೆಂದೇ ತೋರಿತು. ಜೀವನವೆಲ್ಲ ನಿರಾಶೆಯಿಂದ ಕವಿಯಿತು. ಸಂಜೀವರಾಯರ ನೂರರಷ್ಟು ನಿರಾಶೆ ಅವನ ಮುಖದ ಮೇಲೆ ತುಂಬಿತು. ಇನ್ನೇನು ಮಾಡುವುದೆಂದೂ

ತೋರಲಿಲ್ಲ. ಏನಾದರೂ ಉದ್ಯೋಗವನ್ನು ತೊಡಗಲೇ ಎಂದು ಎಣಿಸು ವನು. "ನನ್ನಿಂದಾಗದು" ಎಂದು ತೊಡಗದೆ ಬಿಡುವನು. ತೊಡಗಿದರೆ ನಡುವಿನಲ್ಲಿ ಬಿಡುವನು. ಕೊನೆಕೊನೆಗೇ ಈ ಅಪಜಯಗಳ ಅಪಮಾನವೇ ಅವನ ಜೀವನದಲ್ಲಿ ಅಧಿಕವಾಗಿ ತೋರಿತು. ಕೊರಗುತ್ತ ಕೃಶನಾದನು. ಅವನ ಗೆಳೆಯರಿಗೆ ಅವನ ಗುರುತು ಸಿಗದೆ ಹೋಯಿತು. "ದತ್ತು, ಏನಿದು ನಿನ್ನ ಅವಸ್ಥೆ?"—ಎಂದು ಕೇಳಿದರೆ ಏನೆಂದು ಹೇಳಲು ಅವನಿಗೆ ತಿಳಿಯ ದಾಯಿತು. ಶರೀರವು ಬಾಡಿ, ತಾನು ಬದುಕುವುದಿಲ್ಲವೆಂದು ತೋರಿತು. ತನಗೇನೋ ಶರೀರ ವೇದನೆಯಿದೆಯೆಂದು ತಿಳಿದನು. ಮನಸ್ಸಿನ ಬೇನೇ ಮೊದಲೇ ಇತ್ತು. ದಿನಗಳು ಸಂದುವು. ಆ ಸಂಕಟವನ್ನು ಸಹಿಸುವುದೂ "ತನ್ನಿಂದಾಗದು"—ಎಂದು ತೋರಿತು. ಬೇರೆ ಹಾದಿ ಕಾಣೆನೆಂದು ಆತ್ಮ ಹತ್ಯೆಯ ಯೋಚನೆಮಾಡಿದನು. ಬಂದು ತಾಯಿಯೊಡನೆ—"ಅಮ್ಮಾ, ಮನೆಯಲ್ಲಿದ್ದು ತೀರ ಬೇಸರವಾಗಿದೆ. ಕೆಲವು ದಿನ ಎಲ್ಲಾದರೂ ಅಲೆದಾಡಿ ಕೊಂಡು ಬರುತ್ತೇನೆ" ಎಂದನು. ಪುಣ್ಯಕ್ಕೆ ಆ ತಾಯಿ, "ಮಗು ಒಬ್ಬನಿಂದಲೇ ಹೋಗುವುದು ನಿನ್ನಿಂದಾಗದು" ಎನ್ನಲಿಲ್ಲ. ಹೊರಟನು ಎಲ್ಲಿಗೆಂದು ಅವ ನಿಗೆ ತೋರಲಿಲ್ಲ. ಅವನ ತಂದೆಯ ಹೆಸರು ಗೆರಸೊಪ್ಪೆ ಸಂಜೀವರಾಯ ರೆಂದು. ಏಕೋ ಅವನ ತಂದೆಯ ಊರಿನ ನೆನಪಾಯಿತು ಅಲ್ಲೊಂದು ಬಹಳ ಪ್ರಸಿದ್ಧವಾದ ಜಲಪಾತವಿರುವುದೆಂದೂ ಕೇಳಿದ್ದನು. ಅಲ್ಲಿಗೆಂದು ಹೊರಟನು. ಒಂದೂವರೆ ದಿನ ಪಯಣಬೆಳೆಸಿ ಶರಾವತಿಯ ಜಲಪಾತದ ಬಳಿಗೆ ಬಂದನು. ದಶಂಬರ ತಿಂಗಳು. ಜಲಪಾತವು ಯಾತ್ರಿಕರಿಂದ ತುಂಬಿತ್ತು. ನೂರಾರು ಮಂದಿ ಬರುತ್ತಿರುವರು. ನೂರಾರು ಮಂದಿ ಹೋಗು ತ್ತಿರುವರು. ಶರಾವತಿಯ ಧುಮುಕಾಟವು ಎಷ್ಟು ನಗು ಉತ್ಸಾಹಗಳಿಂದ ತುಂಬಿತ್ತೋ ಆ ಯಾತ್ರಿಕರ ತನುಮನಗಳು ಅಷ್ಟು ನಗು ಉತ್ಸಾಹಗಳಿಂದ ತುಂಬಿದ್ದುವು. ಅವರ ಎಡೆಯಲ್ಲಿ ಒಂದು ದಿನವನ್ನೆಲ್ಲ ದತ್ತನೂ ಅಲೆದಾಡಿ ದನು. ಅವರು ನದಿಯಂತಿದ್ದರೆ, ಇವನು ಕದಲದ ಬಂಡೆಯಂತೆ!

ಮಂಕನಂತೆ ಅಲ್ಲಿನ ಸೃಷ್ಟಿಸೌಂದರ್ಯವನ್ನು ನೋಡತೊಡಗಿದನು. ಇವನು ಅದನ್ನು ಕಂಡನೋ, ಅವೇ ಇವನನ್ನು ಕಂಡುವೋ ಅದು ಮಾತ್ರ

ತಿಳಿಯದು. ಹೆಜ್ಜೆಹಾಕುತ್ತ ರಾಜಾ ತಡಸಲಿನ ಬಳಿ ಬಂದನು. ನಾಲ್ಕಾರು ಮಂದಿ ತರುಣರು ಆದರ ಮಗ್ಗುಲಿನ ಬಂಡೆಯ ಮೇಲೆ ಮಲಗಿ ಕೆಳಗಿನ ಪಾತಾಳ ಸದೃಶ್ಯ ದೃಶ್ಯವನ್ನು ಕಾಣುತ್ತಿದ್ದರು ಅವರು ಹೊರಟುಹೋಗಲು, ದತ್ತನು ಅಲ್ಲಿ ಬಂದು ಮಲಗಿಕೊಂಡು ಕೆಳಗಣ ಅಗಾಧ ಕೊರಕಲನ್ನು ಇಣಿಕಿನೋಡಿದನು. ಒಂದು ಮಗ್ಗುಲಲ್ಲಿ ಗಂಭೀರವಾಗಿ ಧುಮುಕುವ ರಾಜಾ ತಡಸಲು, ಇನ್ನೊಂದು ಮಗ್ಗುಲಲ್ಲಿ ಭೋರ್ಗರೆಯುತ್ತ ಸುತ್ತಿ ಮುರಿದುಬೀಳುವ ಅಬ್ಬರ ತಡಸಲು! ಅಲ್ಲೇ ತುಸುಹೊತ್ತು ಇದ್ದನು. ಅದೇ ಆತ್ಮಹತ್ಯೆಗೆ ಪ್ರಶಸ್ತವಾದ ಸ್ಥಳವೆಂದು ಕಂಡಿತು.

ಸಂಜೆಯಾಯಿತು. ಪಡುವಲಲ್ಲಿ ಸೂರ್ಯನು ಮುಣುಗಿದಂತೆ, ಮೂಡಣ ದಿಕ್ಕಿನಲ್ಲಿ ಹುಣ್ಣಿಮೆಯ ಚಂದಿರನು ಉದಯಿಸಿದನು. ವಿಹಾರಿಗಳು, ಅಲ್ಲಲ್ಲಿ ಅಲೆದಾಡುತ್ತಿದ್ದರು. ಅವನು ಊಟವನ್ನು ಸಹ ಮಾಡಿರಲಿಲ್ಲ. ಅವನ ತಲೆಯಲ್ಲಿ ತನ್ನ ಜೀವನ ನಾಟಕದ ಕೊನೆಯ ದೃಶ್ಯ ತೋರುತ್ತಿತ್ತು. ಮೆಲ್ಲಗೆ ಪ್ರೇತದಂತೆ ರಾಜಾ ತಡಸಲಿನ ಬಳಿ ಬಂದು ಅದೇ ಬಂಡೆಯ ಮೇಲೆ ಕುಳಿತನು. ಮಲಗಿ ಕೆಳಕ್ಕೆ ನೋಡಿದನು. ಆ ಪ್ರಪಾತವು ಮತ್ತಷ್ಟು ಭೀಕರವಾಗಿ ಕಾಣಿಸಿತು ಕೆಳಗಿನ ಜಲಾಶಯವು ಪಾತಾಳದಲ್ಲಿದ್ದಂತೆ ಕಾಣಿಸಿತು. ಇಂಥ ಅಗಾಧವಾದ ತಡಿಯಲ್ಲಿ ತನ್ನಿಂದ ಧುಮುಕುವುದು ಸಾಧ್ಯವಾದೀತೇ? ಆ ಶರಾವತಿಯಂತೆ ಧೂಳೀಧ್ವಂಸವಾಗುವುದು ಸಾಧ್ಯವಾದೀತೇ? ಎಂಬ ಸಂಶಯಗಳುಂಟಾದುವು. "ನನ್ನಿಂದಾಗದು" "ನನ್ನಿಂದಾಗದು"—ಎಂಬ ನಿಶ್ಚಯ ಉತ್ತರವು ಅವನ ಒಡಲಿನಿಂದ ಹೊರಟಿತು. ನಕ್ಕನು . . . .

## ೯. ಗಡಗುಂಟೆಯ ಗೆಳೆಯ.

ಹೊತ್ತು ಮುಳುಗುವ ಸಮಯ. ಶ್ಯಾಮುವು ಆಟವಾಡಿ ದಣಿದು ತನ್ನ ಗೆಳೆಯ ರಾಜೀವ, ಗಿರಿ, ವಾಸು, ನರಸಿಂಗರಿಷ್ಟು ಮಂದಿಯೊಡನೆ ಮಂತ್ರಾಲೋಚನೆಗೆ ತೊಡಗಿದ್ದನು. ಅಂದು ಸೂರ್ಯಾಸ್ತಕ್ಕೆ ಮೊದಲು ಚಂದ್ರನು ಉದಯಿಸಿದ್ದರಿಂದ ಬಾಲಕರು, ಸ್ವಲ್ಪ ಹೊತ್ತುಮಾಡಿ ಮನೆಗೆ ಹೋಗಬಹುದೆಂದು ನಿಶ್ಚಯಿಸಿದ್ದರು ಆಟದ ಸಾಮಾನುಗಳನ್ನು ಬದಿಗಿರಿಸಿ ಕುಳಿತಲ್ಲೇ ಮುಂದೆ, ಸುರೆಯಂಗಡಿಗೆ ಸಾಗುವ ಒಬ್ಬೊಬ್ಬರೇ ಯಾತ್ರಿಕರು ಚಲಿಸುತ್ತಿದ್ದರು. ಒಬ್ಬಿಬ್ಬರು ಉರುಳುತ್ತ, ತೇಲುತ್ತ, ಮರಳುತ್ತಲೂ ಇದ್ದರು. ಅವರನ್ನು ಕಾಣುವುದು, ತಮ್ಮೊಳಗೆ ಪರಿಹಾಸ್ಯಮಾಡುವುದು ಈ ಬಾಲಕರ ಆಟವಾಯಿತು. ತುಸು ಸಮಯದಲ್ಲಿ ಕತ್ತಲ ಛಾಯೆಯು ಮುಸುಕಿತು. ಚಂದ್ರನು ಮೋಡಗಳ ಎಡೆಯಿಂದ ಒಮ್ಮೊಮ್ಮೆ ಕಾಣಿಸಿಕೊಳ್ಳ ತೊಡಗಿದನು. ಊರಿನ ನರಿಗಳು — ತಮ್ಮ ಸರದಿ ಬಂದಿತು, ಇನ್ನು ನೀವು ಮನೆಗೆ ಹಿಂದೆರಳಿರಿ — ಎಂದು ಸೂಚನೆಕೊಡುವಂತೆ ಕೂಗತೊಡಗಿದುವು. ಅವರು ಕುಳಿತ ಮೈದಾನೇ ಕುಂದಾಪುರದ ಪ್ರಸಿದ್ಧ "ನರಿಬೆಣ"ವು. ಮಕ್ಕಳಿಗೆ ನರಿಗಳ ಕೂಗಿಗೆ ಮರುಧ್ವನಿಗೊಡುವುದೆಂದರೆ ಆನಂದದ ಸಂಗತಿಯಾಗಿತ್ತು. ಅವುಗಳು ಕೂಗಿದಂತೆ ಇವರೂ ಕೂಗಿದರು. ಅವು ಇನ್ನಷ್ಟು ಗಟ್ಟಿಯಾಗಿ ಕೂಗಿದುವು. ಇದೇ ಆಟದಲ್ಲಿ ಅವರು ಎಷ್ಟು ಹೊತ್ತು ಕಳೆಯುತ್ತಿದ್ದರೋ ಏನೋ. ರಾಜೀವನ ಕಣ್ಣಿಗೆ ಯಾರೋ ಆ ಕಡೆಯಿಂದ ಬರುವುದಾಗಿ ಕಂಡಿತು. ಅವನು, ಇವರನ್ನು ಸುಮ್ಮನಿರಿಸಿ, ಆ ದಿಕ್ಕನ್ನು ತೋರಿಸಿದನು. ನಿಜಕ್ಕೂ ಯಾರೋ ಇಬ್ಬರು ಬರುತ್ತಿದ್ದರು. ಒಬ್ಬನ ಪರಿಚಯವು ದೂರದಿಂದಲೇ ಸಿಗುವಂತಿತ್ತು. ಅವನು ಸಂಜೆಯಾದರೆ ಆ ಹಾದಿಯಿಂದ ತೆರಳುವ ಸುರಾರಾಧಕರಲ್ಲೊಬ್ಬನು. ಅವನ ಜತೆಯಲ್ಲಿರುವವನು ಯಾರೆಂದು ತಿಳಿಯಲಿಲ್ಲ. ಆದರೆ ಅವನ ವಿಚಾರವೂ ಸಂಜೀವನಿಗೆ ತಿಳಿದಿತ್ತು. ತಿಳಿಸುವ ಕುತೂಹಲವು ಅವನಿಗಿತ್ತು. ಅವನು ತನ್ನ ಗೆಳೆಯರನ್ನು, ಅಲ್ಲೇ ಒಂದು ಪುಟ್ಟ ಕುಣಿಯಲ್ಲಿ

ಕುಳಿತುಕೊಳ್ಳುವಂತೆ ಸನ್ನೆಮಾಡಿದನು. ಇವರು ಮರೆಯಾಗಿ ಕುಳಿತು ನಿರೀಕ್ಷಿಸಿದರು. ಆ ತರುಣರು ಯಾರೆಂದು ಊಹಿಸುವುದು ಇವರಿಂದಾಗ ಲಿಲ್ಲ. ಅಷ್ಟರಲ್ಲಿಯೇ ಅವರೀರ್ವರೂ ಆ ಹಾದಿಯಾಗಿ ಸರಿದರು. ಸ್ವಲ್ಪ ದೂರಸರಿದ ಬಳಿಕ ಗೆಳೆಯರು ಹೊರಕ್ಕೆ ಬಂದರು.

ಶ್ಯಾಮು:—ರಾಜೀವ, ಅವನು ನಮ್ಮ ಕ್ಲಾಸಿನ ರಘು ಅಲ್ಲವೇನೋ?

ರಾಜೀವ:—ಕಂಡರೆ ತಿಳಿಯುವುದಿಲ್ಲವೇ?

ವಾಸು:—ಅವನಿಗೆ ಈ ಪೋಲಿಯ ಬಳಿ ಏನು ಕೆಲಸ?

ರಾಜೀವ:—ರಘುವೇನು ಸಂಭಾವಿತನೆಂದು ತಿಳಿದೆಯಾ? ಅವನಿರು ವುದೇ ಈ ಕುಡಿಕನ ಜತೆಯಲ್ಲಿ. ಇವನೂ ಕುಡಿಯಲು ಕಲಿತಿರುವನೋ ಏನೋ ದೇವರೇ ಬಲ್ಲನು. ಈ ಪೋಲಿಯ ಜತೆಸೇರಿ ಅವನೀಗ ಸಕಲ ವಿದ್ಯೆ ಗಳಲ್ಲೂ ಪಾರಂಗತನು.

ಶ್ಯಾಮು:—ನಿಜವೇ?

ವಾಸು:—ಅದರಲ್ಲಿ ಸುಳ್ಳೆಂದರೇನು?

ಶ್ಯಾಮು:—ರಘು ಅಷ್ಟು ಮೂರ್ಖನೆಂದಾದರೆ, ನನ್ನ ಪ್ರಾಣಹೋ ದರೂ ಅವನ ಸಹವಾಸಮಾಡೆನು.

ಹುಡುಗರೆಲ್ಲಾ ದಾರಿಯುದ್ದಕ್ಕೂ ಅದೇ ಸುದ್ದಿ ಮಾತನಾಡುತ್ತ ಹಿಂದೆರಳಿದರು. ಶ್ಯಾಮುಗೆ ರಘುವಿನ ಮೇಲೆ ಅತ್ಯಧಿಕ ಮಮತೆಯಿತ್ತು. ಅದೆಲ್ಲಾ ಇಂದು ಮುರಿದು ಚೂರಾಯಿತು. ರಘುವು ದುಷ್ಟನೆಂಬುದಕ್ಕೆ ಶ್ಯಾಮುವಿಗೆ ಯಾವ ಪ್ರಮಾಣಗಳೂ ದೊರೆತಿರಲಿಲ್ಲ. ಕೇವಲ ಊರಿನ ಪೋಲಿಯ ಗೆಳೆತನ ಮಾಡಿದುದೆಂಬುದೇ ಅವನ ಕಾರಣವಾಗಿತ್ತು. ಅದೊಂದೇ ಅವನ ಮನಸ್ಸಿಗೆ ಸಾಕಷ್ಟು ಬಲವಾದ ಕಾರಣವಾಯಿತು. ಶ್ಯಾಮುವಿನ ಮನ ಸ್ಸಿನಲ್ಲಿ ದುರ್ವ್ಯಸನಿಗಳ ಕಡೆಗೆ ತೀರ ಹೆಚ್ಚಿನ ತಿರಸ್ಕಾರವಿರುತ್ತಿತ್ತು. ಹೀಗಾಗಿ ರಘುವಿನೊಡನೆ ಮಾತನಾಡುವುದನ್ನು ಬಿಟ್ಟನು. ಮರುದಿನ, ರಘು ಶಾಲೆಗೆ ಬಂದವನು, ತಾನಾಗಿ ಏನೋ ಕಾರಣದಿಂದ ಶ್ಯಾಮುವಿನ ಬಳಿಗೆ ಬಂದು ಮಾತನಾಡಿಸಿದನು. ಥಟ್ಟನೆ ಶ್ಯಾಮುವು "ನಡಿ, ಇನ್ನು ನೀನು ನನ್ನ ಹತ್ತಿರ ಬರಕೂಡದು"—ಎಂದು ಸಿಡಿದು ಮಾತನಾಡಿದನು. ಆಗ ಹತ್ತೆಂಟು

ಬಾಲಕರಿದ್ದರು. ರಘುವಿನ ಮನಸ್ಸು ಮುರಿಯಿತು. ಅವನು ಅಲ್ಲಿಂದ ತೆರಳಿಬಿಟ್ಟನು. ತಿರುಗಿ ಶ್ಯಾಮುವಿನ ಬಳಿ ಹೋಗೆನೆಂದು ನಿರ್ಧರಿಸಿದನು. ಒಂಟಿಯಾಗಿದ್ದರೆ, ಶ್ಯಾಮುವು ಈತೆರ ಮಾತನಾಡಿದ್ದರೂ, ಹಟಹಿಡಿದು ಅವನನ್ನು ಮಾತನಾಡಿಸುತ್ತಿದ್ದನು. ಆದರೆ ಇಂದು ಹತ್ತೆಂಟು ಬಾಲಕರ ಎದುರಿಗಾದ ಅಪಮಾನವು ಅವನಿಂದ ಸಹಿಸದಾಯಿತು ಕೆಲವು ದಿವಸ ಗಳಲ್ಲಿಯೇ ರಘುವಿಗೆ ಶ್ಯಾಮುವಿನ, ಶ್ಯಾಮುವಿಗೆ ರಘುವಿನ, ಸಂಪೂರ್ಣ ಮರವೆಯಾಯಿತು.

ಒಂದೆರಡು ತಿಂಗಳ ಕಾಲ ಸರಿಯಲು ಕುಂದಾಪುರಕ್ಕೆ ಪ್ರಸಿದ್ಧ ನಾಟಕ ಮಂಡಳಿಯೊಂದು ಬರುವುದೆಂದು ಪ್ರಕಟಣೆ ಹೊರಟಿತು. ಊರಿಗೊಂದು ನಾಟಕ ಇಲ್ಲವೆ ಸರ್ಕಸ್ ಮಂಡಳಿ ಬರುವುದೆಂದರೆ ಒಂದು ಜಾತ್ರೆಯೇ ಆದಷ್ಟು ಹರುಷ ಬಾಲಕರಿಗೆ. ಪೇಟೆಯ ಮಗ್ಗುಲಲ್ಲಿ ಅವರ ನಾಟಕ ಶಾಲೆಯ ಸಿದ್ಧತೆಗಳಾಗತೊಡಗಿದುವು. ಸಂಜೆಯಾಯಿತೆಂದರೆ ಹುಡುಗರೆಲ್ಲ ಆಟಗಳನ್ನು ಬಿಟ್ಟು ಅಲ್ಲಿ ನೆರೆಯುತೊಡಗಿದರು. ಶ್ಯಾಮುವಿನ ಗೆಳೆಯರು ಅದಕ್ಕೊಂದು ಆಕ್ಷೇಪವಾಗಿರಲಿಲ್ಲ. ಅಲ್ಲಿ ಕುಳಿತುಕೊಂಡು – "ಈ ಕುಣಿ ಯಲ್ಲಿ ಎಷ್ಟು ಕುರ್ಚಿಗಳು ಹಿಡಿಯಬಹುದು? ಥಿಯಟರು ಪೂರ್ಣ ತುಂಬಿದರೆ ಎಷ್ಟು ಸಾವಿರ ರೂಪಾಯಿಗಳಾಗಬಹುದು? ಈ ಕಂಪೆನಿಯಲ್ಲಿ ರಾಜಾ ಪಾರ್ಟು ಅಷ್ಟು ಚೆನ್ನಾಗಿಲ್ಲವಂತೆ. ಆದರೆ ಮಾತ್ರ ನಕಲಿಪಾರ್ಟು, ರಾಣಿಪಾರ್ಟುಗಳು ಬೇಷ್ ಅಂತೆ!" ಅಂದು ನಾನಾ ಬಗೆಯ ಟೀಕೆಮಾಡು ತ್ತಿದ್ದರು. ಇವರ ಟೀಕೆಯು ನಡೆಯುತ್ತಿದ್ದಂತೆ, ಮಂಡಲದವರ ಸಾಮಾ ನಿನ ರಾಶಿಗಳು ಬಂದು ಬೀಳತೊಡಗಿದುವು. ಹುಡುಗರ ಮನಸ್ಸೆಲ್ಲಾ ಸದಾ ಅವರ ಘರದೆಗಳ ಹೊರೆಯ ಮೇಲೆಯೇ. ಶಾಲೆಯಲ್ಲಿ ಪಾಠಕ್ಕೆ ಕುಳಿತಿದ್ದರೆ "ನಾವು ಬರುವುದರಲ್ಲೆಲ್ಲಾದರೂ ಘರದೆ ಬಿಡಿಸಿಬಿಟ್ಟರೆ!" ಎಂಬ ಚಿಂತೆ! ಸಾಮಾನುಗಳು ಬಂದು ಎರಡು ಮೂರು ದಿನಗಳಾದುವು. ಘರದೆ ಗಳನ್ನು ಬಿಡಿಸಿದಂತೆ ಕಂಡುಬರಲಿಲ್ಲ. ಆದರೆ "ಶ್ರೀ ಜಯಲಕ್ಷ್ಮೀ ಕರ್ಣಾ ಟಕ ಸಂಗೀತ . ನಾಟಕ ಮಂಡಳಿ" ಎಂಬ ದೊಡ್ಡ ಸ್ಯಾನುಬೋರ್ಡನ್ನು ಮಾತ್ರ ಬಿಡಿಸಿದರು. ಅದರ ಹಿಂದೆಯೇ "ಕೆಲವೇ ನಾಟಕಗಳು" – "ನಟ

ಮಹಾನಟರಿಂದ ಕೂಡಿದ ಅತ್ಯದ್ಭುತ ಪ್ರದರ್ಶನಗಳು” ಎಂಬ ಪ್ರಕಟಣೆಗಳ
ನ್ನೂ ಹಂಚಿದರು. ಮಂಡಳದ ವ್ಯವಸ್ಥಾಪಕನು ಊರಿಗೆ ಬಂದನು. ಅವನ
ಜರಿಮುಂಡಾಸಿನ ಹಿಂದೆ ನಾಲ್ವತ್ತು ಹುಡುಗರು ಬಿಡದೆ ತಿರುಗಿದರು. ಶ್ಯಾಮು
ವಿಗೆ ಅವನ ಮೇಲೆ ಅಭಿರುಚಿಯುಂಟಾಗಲಿಲ್ಲ. “ವಾಸು, ನಟರು ಬರುವುದಿಲ್ಲ
ವೇನು?”–ಎಂದು ವಿಚಾರಿಸಿದನು. ವಾಸುವಿಗೇನು ಗೊತ್ತು? ಅವರು ಥಿಏಟ
ರಿನ ಕುಣಿಯಲ್ಲೇ ಕುರ್ಚಿಯ ಮೇಲೆ ಗಂಭೀರವಾಗಿ ಟಿಕೇಟು ಪಡೆಯದೆ ಈ
ಚರ್ಚೆ ನಡಿಸುತ್ತಿದ್ದರು. ಅವರು ಬಾಯಿತೆರೆದ ಮುಹೂರ್ತ ಯಾವುದೋ!
ಅವರ ಕಣ್ಣೆದುರಿಗೆ ದೊಡ್ಡ ಪಡೆಯೊಂದು ಬಂದಿತು. ಅವರ ಎತ್ತರವಾದ
ಟೋಪಿ, ನಿಲುವಂಗಿ, ಜರಿಪೇಟಾ–ಇವುಗಳಿಂದ ಇವರೇ ಆ ನಟಮಹಾನಟರು
ಎಂದು ನಿರ್ಧರಿಸಿದರು. ಜುಲ್ಫನ್ನು ಇಟ್ಟವರೆಲ್ಲರೂ ರಾಜಪಾರ್ಟನವರು
ಎಂದು ತಿಳಿದರು ತುರುಬನ್ನು ಕಟ್ಟಿದವರೆಲ್ಲ ರಾಣೀಪಾರ್ಟನವರೆಂದು
ತಿಳಿದರು. ಡೊಳ್ಳಾದ ಒಂದು ಆಸಾಮಿಯು ಬರಲು “ಶ್ಯಾಮು, ಖಂಡಿತ
ವಾಗಿಯೂ ಇವರು ನಕಲಿ ನಾರ್ಣಪ್ಪನವರು”—ಎಂದು ಕೂಗಿದನು. ಇವನ
ಕೂಗು ಅವನಿಗೂ ಕೇಳಿಸಿತು. ಅವನು ಒಂದು ಮೃದುನಗೆಯನ್ನು ನಕ್ಕನು.
ಅದರಿಂದ ಶ್ಯಾಮು ತನ್ನ ಊಹೆಯೇ ಸರಿಯೆಂದು ನಿಶ್ಚಯಿಸಿದನು. ಅವರು
ಕುಳಿತು ನೋಡುತ್ತಿರುವಾಗಲೇ, ರಂಗಿನ ಘರದೆಗಳನ್ನು ಏರಿಸತೊಡಗಿದರು.
ಅವರ ಚಟುವಟಿಕೆಯನ್ನು ಕಂಡು ಬಾಲಕರಿಗೆ ದಿಗ್ಭ್ರಮೆಯಾಯಿತು.

ಸರಿ, ನಾಳೆಯೇ ನಾಟಕವಂತೆ! ಮೊದಲನೆಯ ನಾಟಕವು “ಶ್ರೀಕೃಷ್ಣ
ಲೀಲಾ” ಎಂದು ಪ್ರಕಟಣೆಯಾಯಿತು. ಶ್ಯಾಮುವು ಗೆಳೆಯರೊಂದಿಗೆ
ಈ ನಾಟಕಕ್ಕೆ ಹೋಗಬೇಕೋ ಬೇಡವೋ ಎಂಬ ಚರ್ಚೆಯಲ್ಲಿ ಬಿದ್ದರು.
ಒಂದು ನಾಟಕವನ್ನು ಬಿಡದಂತೆ ನೋಡುವ ಮನಸ್ಸು ಆದರೆ ಮನೆಯವರ
ಸಮ್ಮತಿ ಸಿಗುವುದು ಕಠಿಣವೇ ಸರಿ. ಅಂತು ಕೃಷ್ಣಲೀಲೆಯು ಹಲವಾವೃತ್ತಿ
ಕಂಡ ನಾಟಕವೇ ಆದುದರಿಂದ ಬೇಡವೆಂದು ನಿರ್ಣಯವಾಯಿತು. “ಹಾಗಾ
ದರೆ ಇನ್ನಾವ ನಾಟಕ ನೋಡಲಿ?” – ಎಂದು ವಾಸುವಿನ ಪ್ರಶ್ನೆ. “ಯಾವು
ದಾದರೂ ಹೊಸ ನಾಟಕ”—ಎಂದು ಶ್ಯಾಮುವಿನ ಪ್ರತ್ಯುತ್ತರ. ಅವರ
ನಾಟಕಗಳ ಹೆಸರನ್ನು ಕೇಳಲು ಯೋಚನೆ ಮಾಡಿ ಗೆಳೆಯರು, ಥಿಏ

ಟರಿನ ಬಳಿ ಹೋದರು. ಲಾಂದ್ರಗಳಿಗೆ ಎಣ್ಣೆ ಸುರಿಯುತ್ತಿದ್ದ ಒಬ್ಬ ಉದ್ದ ಮುಂಡಾಸಿನ ಭಟನನ್ನು ಮಾತನಾಡಿಸಲು ಯತ್ನಿಸಿದರು. ಬಲು ಹೊತ್ತಿನ ಅನಂತರ ಇವರ ಪ್ರಶ್ನೆಗೆ ಉತ್ತರ ದೊರೆಯಿತು. ಒಂದೇಬಾಯಿಗೆ ೨೦ ನಾಟಕಗಳ ಹೆಸರನ್ನು ಸುರಿದುಬಿಟ್ಟನು. ಇವರಿಗೆ ನೆನಪುಳಿಯುವುದೇ ಕಠಿಣವಾಯಿತು. ಅವುಗಳಲ್ಲಿ ಅವರ "ರಣವಿಜಯಿ" ಎಂಬುದು ನವೀನ ನಾಟಕವಿರಬೇಕೆಂದು ಸ್ಪಷ್ಟವಾಯಿತು. "ಆದರೆ ಅದನ್ನು ಈ ಊರಿನಲ್ಲಿ ಎಂದು ಆಡುವರು? ಒಮ್ಮೆ ಆಡದೇ ಹೋದರೆ" ಎಂಬ ಚಿಂತೆಗೊಳಗಾದರು. ಯಾವ ಉತ್ತರವನ್ನೂ ಗಳಿಸಲಾರದೆ ಮನೆಯನ್ನು ಸೇರಿದರು.

ಮರುದಿನ ಶ್ಯಾಮುವಿನ ಆನಂದ ಹೇಳಿ ತೀರದು. ನಾಟಕಮಂಡಲದವರು ಅವನ ನೆರಮನೆಯಲ್ಲೇ ಬಿಡಾರ ಇಳಿದಿದ್ದರು. ಅದೇ ದಿನ "ಕೃಷ್ಣ ಲೀಲೆ!" . . . "ಹೋಗಲೋ ಬಿಡಲೋ" ಎಂಬ ಸಂಕಟ ಬಲವಾಯಿತು. ಸಂಜೆಯ ತನಕವೂ ನಿರ್ಧಾರವಾಗಲಿಲ್ಲ. ವಾಸು, ರಾಜೀವರು ಬರಲು, ತಿರುಗಿ "ಏನು ಮಾಡಲಿ?" ಎಂಬ ಚರ್ಚೆ ತೊಡಗಿತು. "ನನ್ನ ಬಳಿ ಕಾಸಿಲ್ಲ" ಎಂದು ರಾಜೀವ ನುಡಿದನು. ಒಬ್ಬನನ್ನು ಬಿಟ್ಟು ಇನ್ನೊಬ್ಬನು ಹೋಗುವುದು ಸರಿಯಲ್ಲವೆಂದು ನಿರ್ಣಯಿಸಿ ಸುಮ್ಮನಾದರು. ನಿಜಕ್ಕೂ ಆ ರಾತ್ರಿ ಒಬ್ಬರಿಗೂ ನಿದ್ರೆಯಿಲ್ಲ. ಕೃಷ್ಣಲೀಲೆಯ ಪ್ರತಿಯೊಂದು ಚಿತ್ರವನ್ನೂ ಎಣಿಸುತ್ತ ಸಮಯ ಕಳೆದರು. ಆದರೆ ಯಾರು, ಯಾವ ಭೂಮಿಕೆಯನ್ನು ವಹಿಸಿದರು ಎಂಬುದನ್ನು ಊಹಿಸಲಾಗಲಿಲ್ಲ. ಹೋದರೂ ಅವರಲ್ಲಿ ಕೆಲವರ ಹೆಸರಿನ ಪರಿಚಯವೂ ಆಗಿತ್ತು "ಚನ್ನಪ್ಪ, ಶಿದ್ಧಪ್ಪ, ಗಡಗುಂಟ, ಸುಂದರರಾಮ, . . . . ." ಇನ್ನೂ ಎಂಥೆಂಥವೋ ಹೆಸರುಗಳು.

ಮರುದಿನ ಶಾಲೆಗೆ ಕಾಲಿಟ್ಟೊಡನೆಯೇ "ಯಾರು ನಾಟಕಕ್ಕೆ ಹೋದವರು?" ಎಂದು ವಿಚಾರಿಸಿದರು. "ನಾನು" "ನಾನು" ಎಂದು ಹತ್ತೆಂಟು 'ಕಂಠಗಳು'—ಕೂಗಿದುವು. "ಹೇಗಿತ್ತು?" ಎಂದು ಕೇಳುವಷ್ಟರಲ್ಲಿ, ನೂರು ಉತ್ತರಗಳು ಬಂದುವು. "ಹೇ! ನಾರ್ಣಪ್ಪನ ವಿಜಯನ ಪಾರ್ಟು, ಹೇಳುವುದಲ್ಲ." "ರಾಧೆಯೆಂದರೆ ಥೇಟು ರಾಧೆ ಮಹಾರಾಯ."—"ಕೃಷ್ಣನ ಭೂಮಿಕೆ ಮಾಡಿದ ಹುಡುಗ ಮೆಣಸಿನಕಾಯಿ."

“ಯಾರದು ಅವರಲ್ಲಿ ರಾಜಪಾರ್ಟು ಚೆನ್ನಾಗಿಲ್ಲವೆಂದವರು? ಒಂದು ಕಂಸ, ವಸುದೇವ - ಎಷ್ಟು ಚೆನ್ನಾಗಿತ್ತು! ಆಕ್ಟಿಂಗು, ಸಂಗೀತ, ಡ್ರೆಸ್ಸು, ಫರದೆ, ಟ್ರಾನ್ಸಫರು! ನನ್ನ ಜನ್ಮದಲ್ಲಿ ಇಷ್ಟು ಚೆನ್ನಾದ ನಾಟಕ ನೋಡಿಲ್ಲ” — ಎಂದರು. ಶ್ಯಾಮುವಿಗೆ ಹೊಟ್ಟೆ ಉರಿಯೆದ್ದಿತು ಉಳಿದ ವಾಸು, ರಾಜೀವರ ಅವಸ್ಥೆಯು ಬೇರಾಗಿರಲಿಲ್ಲ. ಅದೇ ಚಿಂತೆಯಲ್ಲಿ ಸುಮ್ಮನಾಗಿ ಬಿಟ್ಟನು. ನಿತ್ಯದ ಪಾಠ ಶುರುವಾಯಿತು. ಶ್ಯಾಮುವು ಚೆಲ್ಲಿಹೋದ ಹಾಲಿಗಾಗಿ ಮರುಗುತ್ತಿರುವನು. ಅಷ್ಟರಲ್ಲಿ, ಮುಂದಿನ ನಾಟಕದ ಸ್ಮರಣೆಯಾಯಿತು. ಬಳಿಯಿರುವ ಗೆಳೆಯನ ಬೆನ್ನು ಚಪ್ಪರಿಸಿ “ನಾಳೆಯಾವುದು?” ಎಂದು ಕೂಗಿದನು. ತಾನು ಪಾಠಶಾಲೆಯಲ್ಲಿರುವನೆಂಬ ಸ್ಮರಣೆ ಅವನಿಗಿರಲಿಲ್ಲ. ಒಂದು ಕಡೆಯಿಂದ “ವೀರವಿಜಯಿ” ಎಂದು ಉತ್ತರ ಬಂದಿತು. ಇನ್ನೊಂದು ಕಡೆಯಿಂದ “ಬೆಂಚಿನ ಮೇಲೆ ನಿಲ್ಲು” ಎಂಬ ಅಪ್ಪಣೆ ಬಂದಿತು.

“ವೀರವಿಜಯಿ”—ಎಂಬ ನಾಟಕದ ಹತ್ತು ಹತ್ತು ಪ್ರಕಟಣಾ ಪತ್ರಗಳು ನಮ್ಮ ಗೆಳೆಯರ ಕೈಯಲ್ಲಿದ್ದುವು. ಅವರೆಲ್ಲರೂ ಒಮ್ಮನದಿಂದ ನಾಟಕಕ್ಕೆ ಹೋಗುವ ನಿಶ್ಚಯ ಮಾಡಿದರು. ಯಾವ ಟಿಕೇಟನ್ನು ಕೊಳ್ಳಲಿ! ಕುರ್ಚಿಗೆ ಕಡಿಮೆಕಡಿಮೆ ಒಂದು ರೂಪಾಯಿ ಎಂದು ಹತಾಶರಾದರು. ೦-೧೨-೦ ಆಣೆಯ ಬೆಂಚು ಎಂದು ನಿರ್ಧಾರವಾಯಿತು. ಶಾಲೆ ಹುಡುಗರಿಗೆ ಅರ್ಧವಿದೆಯೇ ಎಂದು ಕೇಳಲು ಶ್ಯಾಮುವು ಓಡಿದನು. ಎದುರಿಗೆ ಅವನ ಪಾಲಿನ ನಕಲಿ ನಾರ್ಣಪ್ಪನು ಭೇಟಿಯಾದನು. ಅವನು ನಗುತ್ತ, ಡಬ್ಬಲ್ ಚಾರ್ಜು ಕೊಟ್ಟಲ್ಲಿ ಶಾಲಾ ಹುಡುಗರಿಗೆ ಅದರ ಅರ್ಧ, ಎಂದನು. ಶ್ಯಾಮುಗೆ ಸಿಟ್ಟುಬಂದಿತು. ನೋಡುತ್ತಾನೆ ಉತ್ತರವಿತ್ತವನು ನಕಲಿ ನಾರ್ಣಪ್ಪನು! ನಗುಬಂದಿತು. ನಿಜವಾಗಿಯೂ ನಕಲಿಯವನು ಎಂದು ಮರಳಿದನು. ಮರಳಿಬಂದವನು ನಾರ್ಣಪ್ಪನ ಪ್ರಶಂಸೆ ತೊಡಗಿದ್ದನು.

‘ವೀರವಿಜಯಿ’ ನಾಟಕದ ದಿನ ಬಂದಿತು. ಗೆಳೆಯರು ಸಂಜೆ ೭॥ ಘಂಟೆಗೇ ನಾಟಕ ಗೃಹಕ್ಕೆ ತೆರಳಿದರು. ಲಕ್ಕೆ ಒಳಕ್ಕೆ ನುಗ್ಗಿದರು. ಇವರೊಂದಿಗೆ ಇನ್ನೂ ನೂರು ಜನರಿದ್ದರು. ಕುರ್ಚಿಗಳೆಲ್ಲಾ ಕಾದಿರಿಸಲ್ಪಟ್ಟಿದ್ದುವು. ಬೆಂಚನ್ನು ಇವರು ಹೋಗಿ ಕಾದಿರಿಸಿದರು. ನಾಟಕಾರಂಭ

೧೦ ಘಂಟೆಗೆ. ಅಲ್ಲಿಯವರೆಗೇನು ಕೆಲಸ! ಕೆಲಸವೇನು? ನಾಟಕ ಮಂಡಲದ ಪುರಾಣ. ಒಂದು ತಾಸಿನೊಳಗೆ ನಾಟಕಶಾಲೆ ಭರತಿಯಾಯಿತು! ಜನರ ಗುಲ್ಲೋ ಗುಲ್ಲು! ಸುತ್ತನೋಡಿದರು. ದ್ವಾರಪಾಲಕರನ್ನು ಕಂಡರು. ಇವರನ್ನು ಒಳಬಿಟ್ಟವನು ನಕಲಿನಾರ್ಣಪ್ಪನೆಂದು ಆಗ ಹೊಳೆಯಿತು. ವಾಸುವು—"ಶ್ಯಾಮು, ನಿನ್ನ ನಾರ್ಣಪ್ಪ ದ್ವಾರಪಾಲಕ ನಕಲಿಯವನಲ್ಲ–" ಎಂದನು. "ಈಗ ಮಾತ್ರ ನಿಂತಿರಬೇಕು. ಬಳಿಕ ರಂಗಮಂಟಪಕ್ಕೆ ಹೋಗುತ್ತಾನೆ" ಎಂದು ಶ್ಯಾಮುವಿನ ಸಮಾಧಾನ.

ಅವರ ಕಣ್ಮುಂದೆಯೇ, ದ್ವಾರದ ಮೂಲಕ, ರಘುಬರುವುದು ಕಾಣಿಸಿತು. ರಘು ರಿಜರ್ವ ಸೀಟನಲ್ಲಿ ಕುಳಿತನು. ಆಶ್ಚರ್ಯವಾಯಿತು. ತುಸು ಅಸೂಯೆಯೂ ಆಯಿತು. "ಯಾರ ದುಡ್ಡೋ ಏನೋ" ಎಂದು ಸಮಾಧಾನ ತಂದುಕೊಂಡರು.

ಸರಿ, ಹತ್ತು ಘಂಟೆಯಾಯಿತು. ಅಂಕದ ಘರದೆ ಮೇಲೆತ್ತಿತು! "ನೋಡೋ. ಸರಿ ಹತ್ತಕ್ಕೆ ನಾಟಕಾರಂಭ. ಎಲ್ಲ ಕಂಪೆನಿಯವರ ಹಾಗಲ್ಲ ಇವರು"—ಎಂದರು. ನಾಟಕ ಮುಗಿಯುವ ವರೆಗೆ ನಮ್ಮ ಗೆಳೆಯರಿಗೆ ಸ್ಮೃತಿ ಸಹ ಇದ್ದಿತೋ ಇಲ್ಲವೋ? ನಾಟಕ ಮುಗಿದರೂ ಏಳುವ ಮನವಾಗಲಿಲ್ಲ. ಎಲ್ಲರೂ ಎದ್ದರು; ಇವರೂ ಎದ್ದರು. "ವೀರವಿಜಯಿ" ನಾಟಕವು ಅಪ್ರತಿಮವಾಗಿತ್ತಂತೆ! ಆ ಸಂಗೀತ! ಆ ಘರದೆ! ಆ ಡ್ರೆಸ್ಸು! ಆ ನಟರು! ಮುಖ್ಯವಾಗಿ ವೀರವಿಜಯಿಯ ಭೂಮಿಕೆಯನ್ನು ವಹಿಸಿದ ಗಡಗುಂಟಿಯ ಪಾರ್ಟು! ಕೇವಲ ೧೬ ವರುಷದ ಬಾಲಕನವನು! ಶ್ಯಾಮುವಿನ ಸರಿ ವಯಸ್ಸು!

ಗೆಳೆಯರು ಕುಣಿಕುಣಿದು ಮನೆಗೆ ಬಂದರು. ಬರುತ್ತ "ಹೇ ವಾಸು, ನೀನೆಂದುದೇ ನಿಜ. ಅವನು ಗೇಟಿನ ನಾರ್ಣಪ್ಪ. ನಕಲಿನಾರ್ಣಪ್ಪ ಬೇರೆ. ಅವನ ರುದ್ರಭಟನ ಭೂಮಿಕೆಯನ್ನು ಕಂಡೆಯಲ್ಲ. ನಕ್ಕುನಕ್ಕು ಹೊಟ್ಟೆ ಹುಣ್ಣಾಯಿತು"— ಎಂದನು ಶ್ಯಾಮು.

ನಾಟಕ ಮುಗಿಯುವಾಗ ರಾತ್ರಿಯ ಮೂರು ತಾಸಾಗಿತ್ತು. ಮನೆಗೆ ಹೋಗಿ ಮಲಗಿದರೆ ಶ್ಯಾಮುವಿಗೆ ನಿದ್ರೆಬಾರದು. "ಗಡಗುಂಟ"ಯ ನೆನಪಲ್ಲದೆ ಬೇರೆಯಿಲ್ಲ.

ಮರುದಿನ ಆದಿತ್ಯವಾರ. ನಾಟಕವಿರಲಿಲ್ಲ. ಇವರ ಪಾಲಿಗೆ ಶಾಲೆಯಿರಲಿಲ್ಲ. ಬೆಳಗೆ ಎದ್ದವನೇ ಮನೆಜಗಲಿಯ ಮುಂದೆಬಂದು ಕುಳಿತನು. ನೆರಮನೆಯ ಬಿಡಾರದಿಂದ ಯಾರಾರು ಹೊರಗೆ ಬರುವರು ಎಂದು ಎಣಿಕೆ ಹಾಕಿದನು. ಹನ್ನೊಂದು ಘಂಟೆಯ ವರೆಗೆ ಸೊಳ್ಳೆ ಸಹ ಹೊರಗೆ ಬರಲಿಲ್ಲ. ಕೊನೆಗೆ ಒಂದೊಂದೇ ಮೋರೆಗಳು ಬಂದುವು. ಅವರು ಹೊರಕ್ಕೆ ಕಾಲಿರಿಸಿದಂತೆ—ಇವನು ಚನ್ನಪ್ಪನಿರಬೇಕು, ಇವನು ಹನುಮಪ್ಪ, ಇವನು ಸುಂದರರಾಮು—ಎಂದು ಗುರುತಿಸಿ ನಿನ್ನೆಯ ಭೂಮಿಕೆಯನ್ನು ಅವರವರ ಕೊರಳಿಗೆ ತಗಲಹಾಕತೊಡಗಿದನು. ಅವನು ಕಾದುಕುಳಿತಿರುವುದು ಗಡಗುಂಟಿಗಾಗಿ! ಹದಿನೆರಡು ತಾಸಾಯಿತು, ಗಡಗುಂಟಿ ಬರುವಾಗ! ಅವನನ್ನು ಕಂಡೊಡನೆಯೇ "ಹ್ಹಾ" ಎಂದು ಮೈಮರೆತು ಕೂಗಿಬಿಟ್ಟನು. ಆ ಹುಡುಗನ ಗಮನವು ಶ್ಯಾಮುವಿನ ಕಡೆಗೆ ಹರಿಯಿತು. ಅವನು ಹಸನ್ಮುಖಿಯಾದನು. ಶ್ಯಾಮುವೂ ಪರಿಚಿತನಂತೆ ನಕ್ಕನು. ಮಾತನಾಡಿಸುವ ಮನ. ಆದರೆ ಧೈರ್ಯವಾಗಲಿಲ್ಲ. ಅವನು ಕಣ್ಮರೆಯಾಗುವ ತನಕ, ಕಣ್ತುಂಬ ನೋಡುತ್ತ ಕುಳಿತನು. ಕೂಡಲೆ ಒಳಗೋಡಿ ಊಟವನ್ನು ಮುಗಿಸಿದನು. ಅವನ ಬರವನ್ನು ಕಾಯಲು, ಎಷ್ಟು ಕುಳಿತರೂ ಅವನು ಕಾಣೆ. ತಿರುಗಿ ಸಂಜೆಯೇ ಅವನ ದರುಶನವಾಯಿತು.

ಗಡಗುಂಟಿಯೂ ಅವನ ಗೆಳೆಯರೂ ಠಾಕುಠೀಕಿನ ಉಡುಗೆಯನ್ನು ಧರಿಸಿ ವಿಹಾರಕ್ಕೆ ಹೊರಟರು. ಅದನ್ನು ಕಂಡು ಶ್ಯಾಮುವೂ ಹೊರಟನು. ತನ್ನ ಗೆಳೆಯರನ್ನು ಕೂಡಿಸಿಕೊಂಡು ಅವರು ಹೊರಟ ಹಾದಿಯನ್ನೇ ಅನುಸರಿಸಿದನು. 'ನರಿಬೆಣ'ದಲ್ಲಿ ಅವರ ಬೈಠಕು ನೆರೆದಿತ್ತು. ಇವರೂ ಹೋಗಿ ಅವರಿಗೆ ಸ್ವಲ್ಪ ಸಮೀಪದಲ್ಲಿ ಕುಳಿತರು. ಆ ದಿನವೊಂದು ಹಾಗೆಯೇ ಕಳೆಯಿತು.

ಮರುದಿನ ನಾಟಕವಿತ್ತು. 'ಶ್ಯಾಮು ಮತ್ತು ಕಂಪೆನಿ'ಯವರು ತಪ್ಪದೆ ಹೋದರು. ಅದರಲ್ಲಿ ಗಡಗುಂಟಿಯ ಎರಡನೆ ರಾಣೀಪಾರ್ಟು ಅದ್ವಿತೀಯವಾಗಿತ್ತಂತೆ! ಅವನನ್ನು 'ಮಾಸ್ತರ್ ಗಡಗುಂಟಿ' ಎಂದು ಕರೆಯುವುದು ಸುಮ್ಮನೇನು?

ಆ ನಾಟಕದ ಮರುದಿನ ಗಡಗುಂಟಿಯು ಒಬ್ಬನೇ ತಮ್ಮ ಬಿಡಾರದ ಮುಂದೆ ಕುಳಿತಿದ್ದನು. ಆ ಸಮಯವೇ ಶ್ಯಾಮುವು ಹೊರಬಿದ್ದನು. ಅವನ ಕಣ್ಣಿಗೆ ಗಡಗುಂಟಿಯು ವಿರಾಮದಲ್ಲಿ ಕುಳಿತಿರುವುದನ್ನು ಕಂಡು ಅತ್ಯಾನಂದ ವಾಯಿತು. ಈಗವನನ್ನು ಮಾತನಾಡಿಸಲೇ ಬೇಕೆಂದು ನಿಶ್ಚಯಿಸಿದನು. ಆದರೆ ಅವನು ಮರುಮಾತನ್ನಾಡದಿದ್ದರೆ—? ಎಂಬ ಸಂಶಯವಾಯಿತು. ಅದಕ್ಕಾಗಿ ಭೀತಿಪಟ್ಟು ಮೌನವಾಗಿ ಕುಳಿತನು. ದೃಷ್ಟಿಯೆಲ್ಲ ಅವನ ಕಡೆಗೇ. ಇವನ ಸುದೈವಕ್ಕೆ ಸರಿಯಾಗಿ ಗಡಗುಂಟಿಯೇ ಇವನನ್ನು ಮಾತನಾಡಿಸಿ ದನು—"ಕಡ್ಡಿಪೆಟ್ಟಿಗೆ ಇದೆಯೇ?" ಎಂದು ಕೇಳಿದನು. "ಕಡ್ಡಿಪೆಟ್ಟಿಗೆ" ಎಂಬುದರ ಅರ್ಥ ಶ್ಯಾಮುವಿಗೆ ತಿಳಿಯಲಿಲ್ಲ—"ಏನು?" ಎಂದು ವಿಚಾರಿ ಸಲು—"ಮಾಚಿಸ್" ಎಂಬ ಉತ್ತರಬಂದಿತು. "ಇಲ್ಲೇ ಬನ್ನಿ, ಕೊಡುತ್ತೇನೆ" ಅಂದನು. ಗಡಗುಂಟಿಗೆ ಒಂಟಿಯಾಗಿ ಕುಳಿತು ಬೇಸರಹಿಡಿದಿತ್ತು. ಅವನ ಬಳಿಗೆ ಹೋದನು. ಶ್ಯಾಮುವು ಹಿಗ್ಗಿನಿಂದ ಅವನನ್ನು ತನ್ನ ಓದುಮನೆಗೆ ಒಯ್ದು ಒಂದು ಕುರ್ಚಿಯ ಮೇಲೆ ಕುಳ್ಳಿರಿಸಿದನು. "ಮಾಚಿಸ್" ತಂದು ಕೊಟ್ಟನು ಅವರಲ್ಲಿ ಮಾತುಕಥೆ ತೊಡಗಿತು. ಆ ಕ್ಷಣದಿಂದ ಅಪೂರ್ವ ಮೈತ್ರಿಯು ಅವರಲ್ಲಿ ಬೆಳೆಯಿತು. ಗಡಗುಂಟಿಯು ಆ ಬಳಿಕ ವಿರಾಮ ವಿದ್ದಾಗಲೆಲ್ಲಾ ಅಲ್ಲೇ ಕುಳಿತು ಸಮಯ ಕಳೆಯುತ್ತಿದ್ದನು. ಅವನಿಗಾಗಿ ಶ್ಯಾಮುವು ಶಾಲೆ ತಪ್ಪಿಸಿದುದೂ ಉಂಟು. ಸಂಜೆಯಾದರೆ, ಇವರ ಮಂಡ ಲಕ್ಕೆ ವಾಸು, ರಾಜೀವ, ನರಸಿಂಗರೂ ಸೇರುವರು. ಗಡಗುಂಟಿಯು ಶ್ಯಾಮುವಿಗೆ ಒಂದೆರಡು ಹಾಡುಗಳನ್ನೂ ಸಹ ಕಲಿಸಿಕೊಟ್ಟನು ಶ್ಯಾಮುವು ಪ್ರತಿಯಾಗಿ ತನ್ನ ರಿಸ್ಟ್‌ವಾಚನ್ನು ಅವನಿಗೆ ಗೆಳೆತನದ ಸ್ಮಾರಕವಾಗಿ ಕೊಟ್ಟನು. ಅವರಲ್ಲಿನ ಗೆಳೆತನ ಎಷ್ಟಕ್ಕೆ ಹೆಚ್ಚಿತೆಂದರೆ ಒಂದು ದಿನ ಶ್ಯಾಮುವಿಗೆ—"ಇನ್ನೆಲ್ಲಾ ಸರಿಯೇ; ನಿಮ್ಮ ಹೆಸರು ಮಾತ್ರ ಏನೂ ಚೆನ್ನಾಗಿಲ್ಲ"—ಎನ್ನುವಷ್ಟು ಧೈರ್ಯವು ಬಂದಿತು. ಅದಕ್ಕೆ ಅವನು—"ಯಾವುದು ಗಡಗುಂಟಿ?"—ಎಂಬುದೇ. ಅದು ನನ್ನ ಹೆಸರಲ್ಲ. ನಮ್ಮ ಊರಿನ ಹೆಸರು. ನಮ್ಮಲ್ಲಿ ಹಾಗೆ ಕರೆಯುವುದೇ ರೂಢಿಯಾಗಿದೆ. ನನ್ನ ನಿಜವಾದ ಹೆಸರು ಲಕ್ಷ್ಮಣರಾವ್" ಎಂದನು. ಲಕ್ಷ್ಮಣರಾಯನು ಕಂಪೆನಿಯ ಮ್ಹಾಲಕರ ಮಗನೆಂದು ಕೇಳಿ ಶ್ಯಾಮುವಿನ

ಹರುಷಕ್ಕೆ ಮಿತಿಯಿಲ್ಲದಾಯಿತು. ಅಂದಿನಿಂದ ಅವನು ನಾಟಕದ ವೇಳೆಗಳಲ್ಲಿ ನೇಪಥ್ಯದಿಂದಲೇ (Green-room) ಇಣಿಕಿನೋಡಲು ಶಕ್ತನಾದನು. ರಘುವಿಗೆ ಅವನ ಈ ಭಾಗ್ಯವನ್ನು ಕಂಡು ಅಸೂಯೆಯಾಗಬೇಕು.

ನಾಟಕ ಮಂಡಳದವರು ಕುಂದಾಪುರದಲ್ಲಿ ಒಂದೂವರೆ ತಿಂಗಳನ್ನು ಕಳೆದರು. ಜನರ ಕೈಯಲ್ಲಿ ಕಾಸು ಕಡಿಮೆಯಾಗುತ್ತ ಬಂದಿತು. ಮಂಡಳದವರು ಉಡುಪಿಗೆ ಪಯಣಸಾಗಿಸುವ ನಿರ್ಧಾರ ಮಾಡಿದರು. ಗಡಗುಂಟಿಯು ಈ ಶುಭವಾರ್ತೆಯನ್ನು ತಾನಾಗಿ ಬಂದು ಶ್ಯಾಮುವಿಗೆ ತಿಳಿಸಿದನು. ಶ್ಯಾಮುವಿಗೆ ಅದು ತೀರ ದುಃಖದಾಯಕ ವಾರ್ತೆ ಅನಿಸಿತು. ಅವರ ವಿರಹದ ದಿನ ಬರಲು ಶ್ಯಾಮುವಿನ ತರುಣ ಒಡಲು ದ್ರವಿಸಿತು. ಕಣ್ಣೀರನ್ನು ಕರೆದನು. ಗಡಗುಂಟಿಯಲ್ಲೂ ಅದರ ಪ್ರತಿಧ್ವನಿ ಮೊಳೆಯದಿರಲಿಲ್ಲ. ಅವನು ಪ್ರೇಮದಿಂದ "ಶ್ಯಾಮು, ಬರುವ ತಿಂಗಳೆಲ್ಲಾ ನಿನಗೆ ರಜೆಯಿದೆ. ನಾವು ಉಡುಪಿಯಲ್ಲಿದ್ದರಾಯಿತಲ್ಲಾ . . . ಇಲ್ಲವಾದರೆ ಮಂಗಳೂರಿನಲ್ಲಿ. ಖಂಡಿತ ನೀನು ಬರಬೇಕು" ಎಂದು ಆಮಂತ್ರಣವಿತ್ತನು.

ಆ ಒಂದು ತಿಂಗಳ ಅವಧಿಯನ್ನು ಶ್ಯಾಮು ಹೇಗೆ ಕಳೆದನೋ ತಿಳಿಯದು. ಅಂತೂ ಕಳೆದನು. ಕೊನೆಗೆ ತಾಯಿಯನ್ನು ಒಡಂಬಡಿಸಿ, ಮಂಗಳೂರಿಗೆ ಧಾವಿಸಿ ತನ್ನ ಆಪ್ತನನ್ನು ಸೇರಿಕೊಂಡನು. ವಾಸುರಾಜೀವರಿಗೆ ಆ ಭಾಗ್ಯವು ದೊರೆಯಲಿಲ್ಲ.

ಮಂಗಳೂರಿನಲ್ಲಿ, ರಘುವೂ ಬಂದಿದ್ದನು. ರಘುವಿಗೂ ಗಡಗುಂಟಿಯು ಪರಿಚಯವಿತ್ತೆಂದು ತಿಳಿದು ಶ್ಯಾಮುವಿಗೆ ಆಶ್ಚರ್ಯವಾಯಿತು. ಗಡಗುಂಟಿಯಿಂದಾಗಿ ರಘುಶ್ಯಾಮರು ತಿರುಗಿ ಒಂದಾದರು. ರಜಾಕಾಲದ ಎರಡು ತಿಂಗಳ ಅವಧಿಯನ್ನು ಈ ಮಿತ್ರತ್ರಯರು ಎರಡು ದಿನಗಳಂತೆ ಕಳೆದರು. ತಿರುಗಿ ವಿರಹವಾಯಿತು. ಊರಿಗೆ ಬಂದರು. ಶ್ಯಾಮುವಿಗೆ ಎಷ್ಟೋ ದಿನಗಳ ವರೆಗೆ, ಹೆಚ್ಚೇನು, ಇನ್ನೂ ಸಹ, ಓದಿನ ಮೇಲೆ ಅಕ್ಕರೆಯುಂಟಾಗಲಿಲ್ಲ. ಸದಾ ಗಡಗುಂಟಿಯ ಸ್ಮರಣೆಯೇ ಅವನಿಗೆ.

ಊರಿಗೆ ಮರಳಿದ ಮೇಲೆ ತಿರುಗಿ ತನ್ನ ಪೂರ್ವದ ಗೆಳೆಯರ ಮೇಲೆ ಅವನಿಗೆ ಅದೇ ಬಗೆಯ ಮಮತೆಯು ಉಳಿಯಲಿಲ್ಲ. ಹಿಂದಿನಂತೆ ರಘುವೂ

ಅವನೂ ಪರಮಾಪ್ತರೆನಿಸಿದರು. ಅವನ ಗೆಳೆಯರಾದ ರಾಜೀವ, ವಾಸು, ನರಸಿಂಗರು ಅಚ್ಚರಿಗೊಂಡರು!

ಶಾಲೆತೊಡಗಿದ ಒಂದು ತಿಂಗಳಲ್ಲೇ ರಘುವು ಜಯಲಕ್ಷ್ಮಿಮಂಡಲದವರನ್ನು ಸೇರಿಕೊಂಡನು. ಶ್ಯಾಮುವಿಗೆ ಗೆಳೆಯರಿಲ್ಲದಾಯಿತು. ತಿರುಗಿ ತನ್ನ ಪೂರ್ವದ ಗೆಳೆಯರನ್ನು ಹುಡುಕಲು ಹೊರಟನು. ಒಂದು ದಿನ ಸಂಜೆ ಮೈದಾನಿನಲ್ಲಿ ಅವರು ದೊರೆಯಬಹುದೆಂದು ನಂಬಿ, ಅವನು ಹೊರಟನು. ಮೈದಾನಿನ ಬಳಿಯ ಗಾಳಿತೋಟದಲ್ಲಿ ಆ ಮೂವರು ಕುಳಿತುದು ಅವನಿಗೆ ಕಾಣಿಸಿತು. ಆ ಕಡೆಗೆ ಕಾಲು ತಿರುಗಿಸಿದನು. ಅವರಾಗ ಶ್ಯಾಮುವಿನ ವಿಚಾರವನ್ನೇ ಮಾತನಾಡುತ್ತಿದ್ದರು. ಏನೆಂದು ತಿಳಿಯುವ ಕುತೂಹಲವಾಗಿ ಅಲ್ಲೇ ಬಳಿಗೆ ಹೋಗಿ, ಪೊದೆಗಳ ಮರೆಯಲ್ಲಿ ಆಲಿಸುತ್ತ ನಿಂತನು.

ವಾಸು:— ರಾಜೀವ, ಗಡಗುಂಟಯು ಎಂಥ ಪ್ರಾಣಿಯೆಂಬುದು ನಿನಗೆ ಗೊತ್ತೇ?

ರಾಜೀವ:— ಯಾಕೆ? ರಘುವಿನ ಹಾಗೆಂದೇ?

ನರಸಿಂಗ:— ರಘುವಿನ ಸುದ್ದಿ ಬಿಡು. ಯಾರೂ ಅವನ ಆಸೆ ಹಿಡಿಯಲಿಲ್ಲ. ಆದರೆ ಈ ಶ್ಯಾಮುವು ಹೀಗಾಗುತ್ತಿದ್ದನೆಂದು ಎಣಿಸಲಿಲ್ಲ. ಪ್ರಾಣಹೋದರೂ ಅವನ ಸ್ನೇಹ ಮಾಡೆನೆಂದವನಿಗೆ, ಅವನ ಸ್ನೇಹವೇ ಬೇಕಾಯಿತು ನಮ್ಮ ಸ್ನೇಹವು ಬೇಡವಾಯಿತು.

ರಾಜೀವ:—ಅಹುದು, ಗಡಗುಂಟಯು ಶಿಕ್ಷಣದ ಫಲವದು. ನೋಡು. ಗಡಗುಂಟಯೆಂಥ ಪ್ರಾಣಿಯೆಂದು ಗೊತ್ತೇನು? ದೂರದಿಂದ ಕಾಣಿಸುವ ಬೆಟ್ಟದವನು. ಹತ್ತಿರ ಹೋದರೆ ಮಾತ್ರ ೬೪ ವಿದ್ಯೆಗಳಲ್ಲೂ ಪ್ರವೀಣನು.

ವಾಸು:— ಅವನು ಅಂಥವನೇ ಬಿಡು. ಈ ಶ್ಯಾಮುವೂ ಅಂಥವನಾಗಬೇಕೆ?

ನರಸಿಂಗ:— ಈಗ ಅಂಥವನಲ್ಲ, ಅವನಿಗೂ ಒಂದು ಬಣ್ಣ ಮಿಗಿಲು. ಗಡಗುಂಟಗೆ ೬೪ ಬಣ್ಣವಾದರೆ ಇವನದು ೬೫.

ಶ್ಯಾಮುವಿನ ಕಿವಿಗೆ ಪ್ರತಿ ಅಕ್ಷರವೂ ಬಿದ್ದಿತು. ರಘುಗಡಗುಂಟಿಯು ರಂತೆಯೇ ತಾನೆಂಬುದೂ ತಿಳಿಯಿತು. ಮಾತನಾಡುವ ಸಾಹಸವಾಗಲಿಲ್ಲ. ಮುಖ ಕಂದಿತು. ತುಟಿಯನ್ನು ಕಚ್ಚಿಕೊಂಡು ಮನೆಗೆ ತೆರಳಿದನು. ತಿರುಗಿ ಅವನು ರಾಜೀವ, ವಾಸು, ನರಸಿಂಗರ ಗೆಳೆತನವನ್ನು ಮಾಡಲಿಲ್ಲೆಂಬುದು ಮಾತ್ರ ನಿಜ.



PRINTED AT THE DHARMA PRAKASH PRESS, MANGALORE.